# ಸಿದ್ಧಗಂಗಾ

ಸಂಪುಟ–27. ಸಂಚಿಕೆ–5. ಮೇ–1991.



ಶ್ರೀ ಸಿದ್ದಗಂಗಾ ಶ್ರೀ ಶ್ರೀ ಗಳವರ "ಜೀವನದರ್ಶನ" ಸಂಶೋಧನೆಗೆ ಅರ್ಹವಾಗಿದೆ ಎಂದು ಅವರ ೮4 ನೇ ಜನ್ಮದಿನೋತ್ಸವವನ್ನು ಧರ್ಮಸ್ಥಳದ ಪೂಜ್ಯ ಶ್ರೀ ವೀರೇಂದ್ರ ಹೆಗ್ಗಡೆಯವರು ಅಧ್ಯಕ್ಷತೆ ವಹಿಸಿದ್ದ ಗದಗ, ಡಂಬಳ ಮಠದ ಜಗದ್ಗುರು ತೋಂಟದಾರ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಸಮ್ಮುಖದಲ್ಲಿ ಉದ್ಘಾಟಿಸಿ ಮಾಡುತ್ತಾ ನುಡಿದರು,

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

ತ್ರಿವಿಧದಾಸೋಹ ಮೂರ್ತಿಗಳಾದ ಶಿವಯೋಗಿ ಪರಮ ಪೂಜ್ಯ
ಡಾ॥ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ 84 ನೇ
ಜನ್ಮದಿನೋತ್ಸವದಂದು ಸನ್ಮಾನಿತರಾದ ನಾಡಿನ ಗಣ್ಯರು. (ವರದಿ 39 ಪುಟ)



ಕುರುಡರ ಬಾಳಿಗೆ "ಕರುಣಾಳು ಬೆಳಕಾಗಿ" ಬಂದಿರುವ ಪದ್ಮಭೂಷಣ ಡಾ॥ ಶ್ರೀ ಎಂ. ಸಿ. ಮೋದಿಯವರು ವಿಶ್ವದಾಖಲಾತಿ "ಗಿನ್ನಿಸ್" ಗ್ರಂಥದಲ್ಲಿ ತಮ್ಮ ಶುಭ ನಾಮವನ್ನು ಶಾಸನ ಗೊಳಿಸಿದ ಶುದ್ಧ ಭಾರತೀಯರು.



ಸಿದ್ದಗಂಗಾ ಜ್ಯೋತಿ ಮುಟ್ಟಿ ಜ್ಯೋತಿಯಾದ ಶ್ರೀ ಆರ್. ಎಂ. ಬಿ. ಆರಾಧ್ಯರು ಸಿದ್ದಗಂಗಾ ಮಠದ ಹಳೆಯ ವಿದ್ಯಾರ್ಥಿಗಳು, ಶ್ರೀ ಮಠದ ಶಿಷ್ಯ ಸಾಗರದಲ್ಲಿ ಪದ್ಮಶ್ರೀ ಪ್ರಶಸ್ತಿಪಡೆದ– ಅನರ್ಘ್ಯರತ್ನ.

# ಸಿದ್ಧಗಂಗಾ

ಸಂಪುಟ–27. ಸಂಚಿಕೆ–5. ಮೇ – 1991.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

" ಶಿವ ಶಿವಾ ಬಸವಣ್ಣ ಬಂದಿಹನು ಎದ್ದೇಳಿ "
" ಭಯವಿಲ್ಲ ಭಯವಿಲ್ಲ " ಅನುಸರಿಸಿ । ಎನುತಿರುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

" ಬಸವಣ್ಣ ಕಲ್ಯಾಣ ಬಸವಣ್ಣನಾ ಹುಚ್ಚು
ಏನುಸವಿಬೆಳಗೆ " ನುತ ಸಂಚರಿಪೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಣ್ಣ ಕಾಯಕ ತವ ಜಿಹ್ವೆಯನು ತುಂಬಿ
ಸ್ವಾನುಭಾವವನುಂಡ ತಣಿದಿರುವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್. ವಿ. ವೀರಭದ್ರಯ್ಯ.

# ಶ್ರೀವಾಣಿ

**ಕೋತಿಗಳ ಕೃತಜ್ಞತೆ.**

ಇದು ಕಂಡದ್ದಲ್ಲ; ಕೇಳಿದ್ದು. ಚಿತ್ರದುರ್ಗದ ಭಕ್ತರೊಬ್ಬರು ಮಠಕ್ಕೆ ಬಂದಿದ್ದರು. 1988 ನೆ ಏಪ್ರಿಲ್ ತಿಂಗಳು. ಸಂಸ್ಥೆಯ ಪ್ರಕರಣದ ಬಗ್ಗೆ ಮಾತನಾಡುತ್ತ ಒಂದು ಪ್ರಸಂಗ ಹೇಳಿದರು. ಚಿತ್ರದುರ್ಗದಲ್ಲಿ ಹತ್ತು ಹನ್ನೊಂದು ವರ್ಷದ ಹುಡುಗನೊಬ್ಬ ಕಾಯಿ ಚೂರು (ತೆಂಗಿನ ಕಾಯಿಯ ಚಿಕ್ಕ ಪುಟ್ಟ ಚೂರು) ಮಾರುವ ಕೆಲಸ ಮಾಡುತ್ತಿದ್ದ. ಬೆಳಗಿನಿಂದ ಸಂಜೆ ಐದು ಘಂಟೆಯವರೆಗೆ ಕಾಯಿಚೂರು ಮಾರಾಟ ಮಾಡುತ್ತಿದ್ದ. ಅದರಿಂದ ಬರುತ್ತಿದ್ದ ಮೂರು ನಾಲ್ಕು ರೂಪಾಯಿಗಳು ಅವನ ಮರುದಿನದ ವ್ಯಾಪಾರಕ್ಕೆ ಬಂಡವಾಳವಾಗುತ್ತಿದ್ದವು. ಮಾರಾಟವಾಗದೆ ಉಳಿದ ಕಾಯಿಚೂರುಗಳನ್ನು ಮನೆಗೆ ಹಿಂತೆಗೆದುಕೊಂಡು ಹೋಗುತ್ತಿರಲಿಲ್ಲ. ಮೇಲುದುರ್ಗದ ಮೇಲಿರುವ ಒಂದು ಕೋಡುಗಲ್ಲಿನ ಮೇಲೆ ಹೋಗಿ ಕೂರುತ್ತಿದ್ದ. ಅಲ್ಲಿ ಕೋತಿಗಳ ಸಂಚಾರ ಜಾಸ್ತಿ. ಹುಡುಗ ಹೋಗಿ ಕೂರುತ್ತಲೇ ಕೋತಿಗಳು ಬಳಿಗೆ ಬರುತ್ತಿದ್ದವು. ತನ್ನಲ್ಲಿ ಉಳಿದಿದ್ದ ಕಾಯಿಚೂರುಗಳನ್ನು ಒಂದೊಂದಾಗಿ ಒಂದೊಂದಕ್ಕೆ ಕೊಡುತ್ತ ಬರುತ್ತಿದ್ದ, ತುಂಬಾ ದಿನಗಳು ಇದು ನಡೆದು ಬರುತ್ತಿತ್ತು. ಹುಡುಗನ ಮನೆಯವರು ತುಂಬಾ ಬಡವರಾದರೂ ಅವನ ಈ ವರ್ತನೆಗಾಗಿ ಕೋಪಿಸುಕೊಳ್ಳುವುದಾಗಲಿ, ನೊಂದುಕೊಳ್ಳುವುದಾಗಲಿ ಮಾಡುತ್ತಿರಲಿಲ್ಲ. ಹೀಗಿರುವಾಗ ಒಂದು ದಿನ ಹುಡುಗ ಎಂದಿನಂತೆ ಸಂಜೆ ಕೋಡುಗಲ್ಲಿನ ಮೇಲೆ ಕುಳಿತು ಕಾಯಿಚೂರು ನೀಡಿಯಾದ ಮೇಲೆ ಇಳಿದು ಬರುವುದಕ್ಕಾಗಿ ಏಳುವಾಗ ಕಾಲುಜಾರಿ ಬೀಳುವುದರಲ್ಲಿದ್ದಾನೆ. ಕೆಳಗೆ ಬಿದ್ದರೆ ನುಚ್ಚುನೂರಾಗುವಷ್ಟು ಆಳವಾದ ಪ್ರಪಾತ. ಮೇಲೆ ನಿಂತು ಕೆಳಗೆ ನೋಡಿದರೆ ತಲೆ ಸುತ್ತು ಬರುತ್ತದೆ. ರಕ್ತದ ಒತ್ತಡ ಹೆಚ್ಚಾಗುತ್ತದೆ. ಅಂತಹ ಭೀಕರ ಅಂತ್ಯಕ್ಷಣ ಹುಡುಗನ ಬಾಳಿಗೆ ಬಂದಿತು. ಇನ್ನೇನು ಬಿದ್ದೇಬಿಟ್ಟ ಎನ್ನುತ್ತಿರುವಾಗಲೇ ಕೋತಿಗಳ ವಿಲಕ್ಷಣ ಕಿರುಚಾಟ ಕೇಳಿ ದುರ್ಗದ ಮೇಲೆ ಸಂಜೆಹೊತ್ತು ವಾಯುಸಂಚಾರಕ್ಕೆ ಬಂದ ಮಧ್ಯ ವಯಸ್ಕರಿಬ್ಬರು ಅತ್ತ ನೋಡುತ್ತಾರೆ. ಪವಾಡವೊಂದು ಕಣ್ಣೆದುರಿನಲ್ಲಿ ನಡೆಯುತ್ತಿದೆ. ಹುಡುಗನ ಕಾಲ ಬಳಿ ಸುತ್ತಮುತ್ತ ಸುಮಾರು ಮೂವತ್ತು ನಲವತ್ತು ಕೋತಿಗಳು ಮುತ್ತಿಕೊಂಡು ಅವನನ್ನು ಹಿಡಿದಿವೆ ಒಂದೊಂದು ಕೈಯಲ್ಲಿ. ಮತ್ತೊಂದು ಕೈಯನ್ನು ಆಸರೆಯಾಗಿ ಕೋಡುಗಲ್ಲನ್ನು ಭದ್ರವಾಗಿ ಹಿಡಿದು ಅತ್ಯಂತ ಜೋಪಾನವಾಗಿ ಹುಡುಗನಿಗೆ ಸ್ವಲ್ಪವೂ ಅಪಾಯವಾಗದಂತೆ ಮೆಲ್ಲಮೆಲ್ಲಗೆ ಕೆಳಮಟ್ಟದವರೆಗೆ ಇಳಿಸಿಕೊಳ್ಳುತ್ತವೆ. ನಡೆದದ್ದು ಏನು ? ಕಣ್ಣೀರು ಸುರಿಸುತ್ತ ಸ್ವಾಮಿ ಕೋತಿಗಳಿಂದ ಬದುಕಿ ಬಂದೆ. ಒಂದು ಚೂರು ಕಾಯಿ ಪ್ರಾಣ ಉಳಿಸಿತು ಎಂದ ಹುಡುಗ. ಪ್ರಾಣಿಗಳಲ್ಲಿರುವ ಈ ಕೃತಜ್ಞತೆ ಆಧುನಿಕ ಜನಾಂಗದಲ್ಲಿ ಮರೆಯಾಗುತ್ತಿರುವುದಕ್ಕೆ ಮರುಕ ವ್ಯಕ್ತಪಡಿಸಿದರು ಆ ಭಕ್ತರು.

(ಪ್ರಾಸಂಗಿಕವಾಗಿ ದರ್ಶನಾರ್ಥಿಗಳಿಗೆ ಹೇಳಿದ್ದು)

**ಸಿದ್ಧಗಂಗಾ ಮಾಸ ಪತ್ರಿಕೆ**
**ಶ್ರೀ ಸಿದ್ಧಗಂಗಾ ಮಠ-572104**
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
**ಪ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು
**ಬಿ. ವೀರಭದ್ರಯ್ಯ**
**ಪಿ. ಎನ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ
**ಎಂ. ರೇಣುಕಾರಾಧ್ಯ**

* * *

ವಿತರಣೆ ವಿಭಾಗ
**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು
**ಹೆಚ್. ಬಿ. ಗಂಗಾಧರಯ್ಯ**
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ
**ಶ್ರೀ ಸಿದ್ಧಗಂಗಾಕ್ಷೇತ್ರ**

ಚಂದಾ ವಿವರ
ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 250-00 ರೂ


### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ. ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.


**"ಸಂಪಾದಕರು"**
**'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ


## ಶ್ರೀ ಸಿದ್ಧಲಿಂಗೇಶ್ವರ ವಚನ



ಊರೊಳಗೆ ಉದಕ ತುಂಬಿ ಬಾಗಿಲೆಲ್ಲಾ ಕೆಸರಾದವು ನೋಡಾ
ಮನೆಯೊಳಗೆ ಕಸ ಹೆಚ್ಚಿ ಸಸಿಯ ನೇಳಲೀಯದು ನೋಡಿರೇ
ಊರೊಳಗಣ ಉದಕವ ಹೊರಡಿಸಿ,
ಬಾಗಿಲೊಳಗಣ ಕಸವಕೆಗೆದು,
ಸಸಿಯ ಸಲಹಿಕೊಂಬುದ ನೀನೊಲಿದು ಕರುಣಿಸಯ್ಯ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

ಪಂಚಭೂತ ಯುಕ್ತವಾದ ದೇಹವೇ ಊರು. ಅದರೊಳಗೆ ಮನಸ್ಸಿನ ವರ್ತನೆ ವಿಷಯರಸಪೂರ್ಣವಾಗಿರುವುದೇ ಉದಕ. ಅದರಿಂದ ಪಂಚೇಂದ್ರಿಯಗಳು ತುಂಬಿ ಕೆಸರಾಗಿವೆ. ಹಾಗಾಗಿ ಊರಮಧ್ಯದಲ್ಲಿ ಅಜ್ಞಾನದವಗುಣವೆಂಬ ಸದೆ ಬೆಳೆದು ಸದ್ವಿವೇಕ ವೃಕ್ಷಸ್ವರೂಪವಾದ ಇಷ್ಟಲಿಂಗದ ಸತ್ಕ್ರಿಯ ಸಮ್ಯಕ್‌ಜ್ಞಾನಗಳೆಂಬ ಕೊನರು ಕುಡಿಯಿಡಲು ಅವಕಾಶವಾಗುತ್ತಿಲ್ಲ ಮನಸ್ಸನ್ನು ಆವರಿಸಿರುವ ವಿಷಯರಸವನ್ನೂ, ವೈದ್ಯೋಪಚಾರದ ಮೂಲಕ ಉದಾತ್ತಗೊಳಿಸಿ ಪ್ರಾಣಲಿಂಗಕ್ಕೆ ಅಭಿಷೇಕಮಾಡಬೇಕು. ಪಂಚೇಂದ್ರಿಯಗಳ ಅಜ್ಞಾನದ ವರ್ತನೆಯೆಂಬ ಕೆಸರನ್ನು ಸುಜ್ಞಾನದಿಂದ ನುಡಿಸಬೇಕು. ದೇಹ ಸಂಬಂಧವಾದ ಅಜ್ಞಾನದ ಅವಗುಣವನ್ನು ಮಂತ್ರಸ್ಮರಣೆಯಿಂದ ನಿವೃತ್ತಿಗೊಳಿಸಬೇಕು. ಅಂಥ ಕೆಸರನ್ನು ತೆಗೆದು ಸದ್ವಿವೇಕ ವೃಕ್ಷ ಸ್ವರೂಪವಾದ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ, ಷೋಡಶೋಪಚಾರ, ಅರ್ಚನ, ಅರ್ಪಣಗಳನ್ನರ್ಪಿಸಿ ಶುದ್ಧ ಬುದ್ಧಿಯನ್ನು ಕೃಪೆಮಾಡು ಎಂದು ಶ್ರೀ ಗುರುವನ್ನು ಶಿಷ್ಯನು ಬಿನ್ನವಿಸಿ ಕೊಳ್ಳುತ್ತಿದ್ದಾನೆ.

# ಸಂಪಾದಕೀಯ.

**ಬಸವ ಜಯಂತಿ**

ಇದು ಜಯಂತಿಗಳ ಯುಗ ಲೆಕ್ಕವಿಲ್ಲದಷ್ಟು ಜಯಂತಿಗಳು. ದಿನಬೆಳಗಾದರೆ
ಒಂದಲ್ಲ ಒಂದು ಜಯಂತಿ. ಹಾಡಿ ಹೊಗಳಿದ್ದು. ಮಾತಿನ ಮಾಲಾರ್ಪಣೆಯ
ದಂಥೆಯಲ್ಲಿ ಮಹಾಪುರುಷರ ಬಾಡಿದ ಮುಖಕಾಣಲೇ ಇಲ್ಲ, ಕಂಡರೂ ಕಾಣ
ದಂತೆ ಬಾಳುವ ಕಲೆ ಇಂದಿನದು. ಒಳಹೊರಗೆ ತಾಳಮೇಳವಿಲ್ಲದಂಥ ಬದುಕು.
ಮಹಾಪುರುಷರ ಸ್ಮರಣೆ ಪವಿತ್ರವಾದುದೇ. ಸಂಸ್ಕೃತಿಯ ಲಕ್ಷಣವೇ ಸರಿ. ಆದರೆ
ಕೇವಲ ಸ್ಮರಣೆಯೊಂದೇ ಸಾಲದು. ಅವರು ನಡೆದು ತೋರಿಸಿದ ಹಾದಿಯಲ್ಲಿ ಹೆಜ್ಜೆ
ಇಡಬೇಕು. ತಪ್ಪು ಒಪ್ಪುಗಳ ಅನಾವರಣವಾಗಬೇಕು, "ಅನಾವರಣವಾದ ಮೇಲೆ
ಸಿದ್ಧವಾಗಬೇಕು ಶಿಕ್ಷೆಗೆ, ಅಂಥ ಧೈರ್ಯ ಎಲ್ಲಿದೆ ? ಯಾರಲ್ಲಿ ಕಾಣುತ್ತಿದೆ ? ದೇಶವ
ನ್ನಾಳುವ ನಾಯಕರು ಹೇಗಿದ್ದಾರೆ ? ಯಾರಿಗಿದ್ದಾರೆ ? ಬಸವಣ್ಣ ದೀನದಲಿತರ
ಕಲ್ಯಾಣಕ್ಕಾಗಿ ತನಗಿದ್ದ ಮಂತ್ರಿ ಪದವಿಯನ್ನೇ ಬಿಟ್ಟು ಬಂದ. ಇಂದಿನವರು
ತಮ್ಮ ಅಧಿಕಾರಕ್ಕಾಗಿ ನಾಚಿಕೆ ಬಿಟ್ಟು ನರ್ತನ ಮಾಡುತ್ತಿದ್ದಾರೆ, ಬಾಯಲ್ಲಿ ಬಡ
ವರ ಉದ್ಧಾರ ಆಗಿದೆಯೆ ? ಜನನಾಯಕರು ಎನಿಸಿಕೊಂಡಿರುವ ಇವರಿಗೆ ಬಸವಣ್ಣ
ಅನುಸರಿಸಿದ ಆಡಳಿತ ಸೂತ್ರಗಳ ರೂಪುರೇಷೆಯಾದರೂ ಗೊತ್ತಿದೆಯೇ ?
ಇವರು ಸಾರಿ ಸಾರಿ ಘೋಷಿಸುತ್ತಿರುವ ಸಮಾನತೆ ಎಂಬ ಮಾತು
ಕೃತಿರೂಪಕ್ಕಿಳಿದಿದೆಯೇ ? ಇನ್ನು ಬಸವಣ್ಣನ ಅನುಯಾಯಿಗಳು ಮಾಡುತ್ತಿರುವು
ದಾದರೂ ಏನು ? ಜಯಂತಿ ದಿನ ಫೋಟೋ ಪೂಜಿಸಿ, ಪಾಯಸ ಸವಿದು, ವಚನ
ಹಾಡಿ, ಮೆರವಣಿಗೆ ಮಾಡಿ ತೃಪ್ತರಾಗುವುದು ತಾನೆ ? ಬಸವಧರ್ಮೀಯರಲ್ಲಿಯೇ
ಇಂದು ಏನೆಂಥ ಉಬ್ಬುತಗ್ಗುಗಳಿವೆ ? "ಉಂಬಲ್ಲಿ ಉಡುವಲ್ಲಿ ಕುಲವಳಿದರೂ"
"ಕೊಂಬಲ್ಲಿ ಕೊಡುವಲ್ಲಿ ಕುಲವನರಸ'ದಿದ್ದರೂ ಒಳಪಂಗಡಗಳ ವ್ಯವಸ್ಥಿತ ಒಳದಾರಿ
ಗಳು ಅದೆಷ್ಟೊಂದಿವೆ ! ಇದು ಬಸವಣ್ಣ ಸಾರಿದ ಧರ್ಮ ಮಾರ್ಗವೇ ? ಬಸವಣ್ಣ
ಮುಚ್ಚು ಮರೆಯಿಲ್ಲನಂತೆ ಬಾಳಿದ ಮಾನವತಾವಾದಿ. ಆದರೆ ನಾವೆಂಥವರು ?
ವ್ಯವಹಾರಕ್ಕೆ ಬಸವಣ್ಣ ಅಂದರೆ ಸ್ವಾರ್ಥ ಸಾಧನೆಗೆ ಬಸವಣ್ಣ. ಇನ್ನುಳಿದುದಕ್ಕೆ
ನಾವು ನಾವೇ. ಬಸವಣ್ಣ ಹೃದಯವಂತ ಪುಣ್ಯಮೂರ್ತಿ. ಸದುವಿನಯ,
ಮೃದು ನುಡಿಗಳೇ ಆತನ ದಿವ್ಯ ಸಂಪತ್ತು. ಭಕ್ತನಾಗಬಯಸಿದವನೇ ಹೊರತು
ಜಂಗಮನಾಗಲಾಶಿಸಲಿಲ್ಲ. ಭಕ್ತಿಯನ್ನು ಪೃಥ್ವಿಯೆಂದು ತುಂಬು ಗೌರವದಿಂದ
ಆರಾಧಿಸಿದ; ಆನಂದದಿಂದ ಬದುಕಿದ, 'ಕರ್ತಾರನ ಕಮ್ಮಟ" ವೆಂದು ಕರೆದ.
ಬಸವಣ್ಣನ ಪ್ರಗತಿಶೀಲ ಮನೋಧರ್ಮ ತುಂಬ ತೀಕ್ಷ್ಣವಾದುದು, ಮೌಢ್ಯವನ್ನು



ಕೇವಲ ಮೂದಲಿಸಲಿಲ್ಲ. ಮುಖವೆತ್ತಿ ಮಾತಾಡಿದ. ಬಸವಜಯಂತಿ ಹಬ್ಬವಾದರೆ
ಸಾಲದು. ಆತ್ಮಾವಲೋಕನದ ಕನ್ನಡಿಯಾಗಬೇಕು. ಬಸವಣ್ಣ ಆಭರಣವಾದರೆ
ಸಾಲದು. ಆತ್ಮಪರೀಕ್ಷೆಯ ಸಾಧನವಾಗಬೇಕು. ಬಸವಣ್ಣನ ವಚನಗಳ
ಒಂದೊಂದು ಮಾತೂ ನಮ್ಮನ್ನು ತಿದ್ದುವ 'ಪ್ರಸಾದ'ವಾಗಬೇಕು. ಬಸವಣ್ಣ,
ಬಸವಜಯಂತಿಗಳು ಅರ್ಥಪೂರ್ಣವಾಗಬೇಕಾದರೆ ಬಸವಣ್ಣನ ಸಮಾಜದವರೆಂದು
ಹೇಳಿಕೊಳ್ಳುವ ಜನಾಂಗದ ರೀತಿನೀತಿಗಳು 'ಅನ್ಯರಿಗೆ ಅಸಹ್ಯಪಡ'ದಂತಿರಬೇಕು.
ಬಸವಣ್ಣನಂಥ ಮಹಾಮಾನವತಾವಾದಿಯ ಪರಂಪರೆಯುಳ್ಳ ಸಮಾಜದ ಸಂಘ
ಸಂಸ್ಥೆಗಳು ಮಠಮಾನ್ಯಗಳು ತಮ್ಮ ಸೇವಾ ಜೀವನವನ್ನು ಲೋಕಕಲ್ಯಾಣಕ್ಕೆ
ಅರ್ಪಿಸುವಲ್ಲಿ ಇನ್ನಷ್ಟು ಶ್ರಮಿಸಬೇಕು. ಸಮಾಜದಲ್ಲಿರುವ ದೀನದಲಿತರನ್ನು
ನೆಮ್ಮದಿಯಿಂದ ಬಾಳುವಂತೆ ಯೋಜನೆಗಳನ್ನು ರೂಪಿಸಬೇಕು. ಕರ್ನಾಟಕದ
ಹೆಮ್ಮೆಯ ಪರಂಪರೆಗೆ ಅಪಾರ ಕೊಡುಗೆಯನ್ನು ಕೊಟ್ಟಿರುವ ಬಸವಣ್ಣನ ಧರ್ಮ
ದವರು 'ಬಸವ ಜಯಂತಿ' ಅರ್ಥಪೂರ್ಣವಾಗುವಂತೆ ಮುಂಬರುವ ಚುನಾವಣೆಗಳಲ್ಲಿ
'ಶುದ್ಧಚಾರಿತ್ರ"ವುಳ್ಳವರಿಗೆ ಮಾತ್ರ ಬೆಂಬಲಿಸಬೇಕು

---

**ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.**

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಸಂಚಿಕೆಗಳು ಕೆಲವು ಸದಸ್ಯರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮ ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ ಕಳುಹಿಸಿ ಕೊಡುವುದರ ಮುಖೇನ "ಸಿದ್ಧಗಂಗಾ" ನಿಮಗೆ ಕ್ರಮವಾಗಿ ತಲುಪಲು ಸಹಕರಿಸಬೇಕಾಗಿ ಪ್ರಾರ್ಥನೆ. **ತಮ್ಮ ಸದಸ್ಯತ್ವದ ನಂಬರನ್ನು ತಪ್ಪದೇ ತಿಳಿಸಿರಿ.**

ಪ್ರಕಾಶಕರು.

---

ತ್ರಿವಿಧದ
ಡಾ॥ ಶ್ರೀ
ಜನ್ಮದಿನೊ



ಕುರುಡರ ಬಾಳಿಗೆ
ವಿಶ್ವದಾಖಲಾತಿ



ಸಿದ್ದ ಗಂಗ
ಮಠದ ಹಳೆಯ

## ದಾನಿಗಳಿಗೊಂದು ಸದವಕಾಶ

### ಶ್ರೀ ಮಠದ ಸಮಸ್ತ ಭಕ್ತಾದಿಗಳಿಗಾಗಿ

* ಪ್ರತಿ ತಿಂಗಳು ಯಥಾ ಶಕ್ತಿ ನಿಮ್ಮ ಕಾಣಿಕೆ ಕಳಿಸಿರಿ.
* ಮನಿಯ್ಯಾರ್ಡರು ದ್ವಾರಾ ಕಳುಹಿಸಬಹುದು.
* ಮೊದಲ ಬಾರಿ ಶ್ರೀಗಳವರಿಂದ ಪತ್ರ ಬರುತ್ತದೆ.
* ಪ್ರತಿ ತಿಂಗಳು ಶ್ರೀಗಳವರೇ ಹಣಪಡೆದು ಸಹಿಮಾಡಿದ ಕೂಪನ್ ಬರುತ್ತದೆ.
* ಯಥಾಶಕ್ತಿ ಕಾಣಿಕೆ ಕಳುಹಿಸುವುದು ಯಾರಿಗೂ ಹೊರೆಯಾಗಲಾರದು.
* ಪ್ರತಿಯೊಬ್ಬರ ಒಂದೊಂದು ಕಾಣಿಕೆಯೂ ಹಲವು ಸಹಸ್ರಗಳೇ ಆಗಿ ಶ್ರೀಗಳವರ ಪುಣ್ಯಕಾರ್ಯಕ್ಕೆ ಸಹಕಾರಿಯಾದೀತು.

### ಪ್ರತಿ ಶತ ಒಂದು ರೂ. ಯೋಜನೆ

(ಶ್ರೀ ಮಠದ ಎಲ್ಲಾ ಹಳೆಯ ವಿದ್ಯಾರ್ಥಿಗಳು ಮತ್ತು ಆ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವವರಿಗೆ)

* ನಿಮಗೆ ಪ್ರತಿ ಮಾಹೆ ನಿರ್ದಿಷ್ಟ ಆದಾಯ ಉಂಟು.
* ಅದರಲ್ಲಿ ಪ್ರತಿಶತ ಒಂದು ರೂ. (*one percent*) ಶ್ರೀ ಮಠಕ್ಕೆ ಕಳುಹಿಸಬಹುದು.
* ಒಬ್ಬೊಬ್ಬರೇ ಕಳುಹಿಸಬಹುದು ಅಥವಾ ಹಲವರು ಒಟ್ಟಾಗಿ ಕಳುಹಿಸಬಹುದು.
* ಚೆಕ್, ಡ್ರಾಪ್ಟ್ ಅಥವಾ ಎಂ.ಓ ಕಳುಹಿಸಬಹುದು.
* ಶ್ರೀ ಶ್ರೀಗಳವರ ಹೆಸರಿಗೇ ಕಳುಹಿಸಬೇಕು.
* ಈ ನಿಧಿ ಸತ್ಪಾತ್ರಕ್ಕೆ ಸಲ್ಲುತ್ತದೆ.

ಜೀವನದಲ್ಲಿ ದಾನ ಮಾಡುವವರು ಇಷ್ಟು ಉತ್ಕೃಷ್ಟ ದಾನವನ್ನು ಮಾಡಲು ಹಿಂಜರಿಯಬಾರದು. ಇದಕ್ಕೂ ಶ್ರೇಷ್ಠ ಪಾತ್ರತ್ವ ನಿಮ್ಮ ದಾನಕ್ಕೆ ಅನ್ಯತ್ರ ದೊರೆಯದು. ಇದು ಸುಸಮಯ, ಅಪರೂಪದ ಅವಕಾಶ. ಈ ತಿಂಗಳಿನಿಂದಲೇ ಕಾರ್ಯರೂಪಕ್ಕೆ ತನ್ನಿ. ಇಂದೇ ಕಳಿಸಿರಿ. ಜ್ಞಾನ ದೀವಿಗೆಯಾಗಿ ಶ್ರೀ ಸಿದ್ಧಗಂಗಾ ಮಠ ನಾಡಿಗೆ ಬೆಳಕನ್ನು ಚೆಲ್ಲುತ್ತಿದೆ.

* ಪುಣ್ಯ ಕಾರ್ಯಕ್ಕಾಗಿ ಉದಾರ ನೆರವು ನೀಡಿರಿ.

ಇತಿ,
ಭಕ್ತ ಮಂಡಳಿ.

# ಸಿದ್ಧಗಂಗೆಯ ಬೆಳಕು

ಪ್ರೊ॥ ಜಿ.ಎಸ್. ಸಿದ್ಧಲಿಂಗಯ್ಯ, ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ಒಂದ ಹಳ್ಳಿಗೆ ಭಾಷಣಕ್ಕೆ ಹೋಗಬೇಕಾಯಿತು. ಬಹುಶಃ ಮೋಟಗಾನ ಹಳ್ಳಿಯಿರಬೇಕು. ನೆಲಮಂಗಲ ದಾಟುವುದರೊಳಗೆ ಕುಣಿಗಲ್ ಮಾರ್ಗದಲ್ಲಿ ಸ್ವಲ್ಪ ದೂರ ಕ್ರಮಿಸಿ ಎಡಕ್ಕೆ ತಿರುಗಬೇಕು. ಅಲ್ಲಿಂದ ಮೋಟಗಾನಹಳ್ಳಿಗೆ ಹೋಗಲು ಸ್ವಲ್ಪದೂರ ಹೋಗುತ್ತಿದ್ದಂತೆ ಸುಮಾರು ಹತ್ತರಿಂದ ಹದಿನಾರು ಕಿಲೋಮೀಟರ್ ಉಬ್ಬುತಗ್ಗುಗಳಿಂದ ಕೂಡಿದ ರಸ್ತೆಯಲ್ಲದ ರಸ್ತೆ ನನ್ನ ಮಿತ್ರರ ಕಾರಿನಲ್ಲಿ ಪ್ರಯಾಣಿಸುತ್ತಿದ್ದರೂ ಅತ್ಯಂತ ಅಸುಖಕರವಾದ ಪ್ರಯಾಣ ಅದು ಅನ್ನಬೇಕು. ಕಾರು ಚಲಿಸುವವರೆಗೂ ಮತ್ತು ಕುಳಿತವರಿಗೂ ಗೊಣಗಿಕೊಳ್ಳುತ್ತಲೇ ಪ್ರಯಾಣ ಮುಗಿಸುತ್ತಿದ್ದಂತೆ ಧ್ವನಿಕರ್ದಕದ ಸದ್ದು ಕಾರ್ಯಕ್ರಮ ಆಗಲೇ ಆರಂಭವಾಗಿದೆ ಎಂದು ತಿಳಿಸಿತು, ವೇದಿಕೆಯ ಬಳಿಯಲ್ಲೆ ಕಾರು ನಿಲ್ಲಿಸಿ ವೇದಿಕೆಯೇರಿದೆವು.

ಕಾರ್ಯಕ್ರಮ ಆಗಲೇ ಆರಂಭವಾಗಿತ್ತು. ಸಿದ್ಧಗಂಗೆಯ ಮಠಾಧ್ಯಕ್ಷರಾದ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಶ್ರೀ ಸ್ವಾಮಿಗಳವರು ಆಸೀನರಾಗಿದ್ದರು. ಎಂದಿನಂತೆ ಭಂಗಿಯ ಕಣ್ಣುಗಳು ಮುಚ್ಚಿದ್ದವು. ಕಣ್ಣು ತೆರೆದು ಮುಗುಳ್ನಕ್ಕರು. ಸಮುಸ್ಕರಿಸಿ ಕುಳಿತೆ ಮತ್ತೆ ಕಣ್ಣು ಮುಚ್ಚಿದವು. ಕಣ್ಣುಮುಚ್ಚಿದ ಸ್ವಾಮೀಜಿಯ ಚಿತ್ರ ನನಗೆ ಹೊಸತೇನೂ ಅಲ್ಲ. ಬಹುಶಃ 1967 ಇರಬೇಕು. ರಾಜ್ಯಾದ್ಯಂತ ಬಸವಣ್ಣನವರ ಅಷ್ಟ ಶತಮಾನೋತ್ಸವದ ಅಚರಣೆ ನಡೆದಿತ್ತು. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಪ್ರೊ॥ ದೇ. ಜ. ಗೌ. ಒಂದು ದೊಡ್ಡ ವಿಚಾರ ಸಂಕಿರಣವನ್ನು ಏರ್ಪಡಿಸಿದ್ದರು. ಅದರಲ್ಲಿ ಪಾಲ್ಗೊಳ್ಳುವ ಅವಕಾಶ ಪಡೆದ ನಾನೂ ಒಂದು ಪ್ರಬಂಧವನ್ನು ಮಂಡಿಸಬೇಕಿತ್ತು. ನನಗಿಂತ ಮೊದಲೇ ಒಂದು ಪ್ರಬಂಧ ಮಂಡನೆಯಾಗಿತ್ತು. ಆಗಲೂ ಸ್ವಾಮೀಜಿ ಕಣ್ಣುಮುಚ್ಚಿಯೇ ಇದ್ದರು. ಪ್ರಬಂಧ ಮಂಡನೆಗೆ ನನಗೆ ಸುಮಾರು ಇಪತ್ತು ನಿಮಿಷಗಳಕಾಲ ಅವಕಾಶ ಕೊಟ್ಟಿದ್ದರೆಂಬ ನೆನಪು. ಅವಧಿ ಮುಗಿಯುತ್ತಿದ್ದಂತೆ ನಿದ್ರಿಸುತ್ತಿರಬಹುದೆಂದುಕೊಂಡಿದ್ದ ಸ್ವಾಮೀಜಿ ಅಂದಿನ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು ಬೆಲ್ಲು ಸದ್ದು ಮಾಡಿದ್ದು ನೆನಪು ನನಗೇನೂ ಆಶ್ಚರ್ಯ ಅನ್ನಿಸಲಿಲ್ಲ. ಪ್ರಬಂಧದ ಅವಧಿ ಮುಗಿದುದನ್ನು ಸೂಚಿಸಿರಬೇಕು ಅನ್ನಿಸಿತು. ಆದರೆ. ಆಶ್ಚರ್ಯವಾದದ್ದು ಮಾತ್ರ ನಿಜ. ನಿದ್ರಾಮುದ್ರಿತರಾಗಿದ್ದಂತ ಇದ್ದ ಸ್ವಾಮೀಜಿ ಎದ್ದುನಿಂತರು. ಉನ್ನತವಾದ ಬಾಗದ ದೇಹ ವ್ಯಕ್ತಿತ್ವದಂತೆಯೆ ನಿಂತೆ ಅವರು ಮಾತನಾಡಲು ತೊಡಗಿದರು, ಮಂಡಿಸಿದ ಪ್ರಬಂಧಗಳ ಮುಖ್ಯ ವಿವರಗಳನ್ನು ಪ್ರಸ್ತಾಪಿಸಿದರು. ಚಾಚೂತಪ್ಪ

ತ್ರಿವಿಧದ
ಡಾ || ಶ್ರೀ
ಜನ್ಮದಿನೊ



ಕುರುಡರ ಬಾಳಿಗೆ
ವಿಶ್ವದಾಖಲಾತಿ



ಸಿದ್ದಗಂಗ
ಮಠದ ಹಳೆ

ದಂತೆ ಮುಖ್ಯ ಅಂಶಗಳ ಪ್ರಸ್ತಾಪ ಮಾಡಿದಮೇಲೆ ಬಸವಣ್ಣನವರ ವ್ಯಕ್ತಿತ್ವವನ್ನು
ಕುರಿತು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ತಮ್ಮ ಜೀವನ ದರ್ಶನವನ್ನು ಮನನು
ಟ್ಟುವಂತೆ ತೆರೆದಿಟ್ಟರು. ಬಸವಣ್ಣನವರ ಪೂರ್ಣಕ್ರಾಂತಿಯ ಸಂದೇಶದ ಪವಾಡ
ಸ್ಥಿತಿಯನ್ನು ವರ್ಣಿಸುವಾಗ ಆ ತನ್ಮಯತೆ ನಿಜವಾಗಿ ಸ್ಮರಣೀಯವಾದುದು.

ಈ ಘಟನೆಯನ್ನು ನೆನಪು ಮಾಡಿಕೊಳ್ಳಲು ಅನೇಕ ಕಾರಣಗಳಿವೆ.
ಅಂದು ಪ್ರಬಂಧಗಳ ಮಂಡನೆಯಾಗುವಾಗ ಸಭೆಯಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು
ಆಕಳಿಸುವುದನ್ನು ತೂಕಡಿಸುವುದನ್ನು ನೋಡಿದ್ದೆ. ಆಕಳಿಕೆಯಲ್ಲಿ ಮುಚ್ಚಿದ ಕಣ್ಣು
ಮುಚ್ಚಿತ್ತು. ಆದರೆ ಆ ವ್ಯಕ್ತಿತ್ವದ ಎಚ್ಚರದ ಹಾಗೂ ಜಾಗರದ ಸ್ಥಿತಿ ನಿಜ
ವಾಗಿ ನನ್ನನ್ನು ಬೆರಗುಗೊಳಿಸಿತು.

ಬೆಳಗಿನ ಜಾವ ಸುಮಾರು ಮೂರು ಘಂಟೆಗೆ ಆರಂಭವಾಗುವ ದಿನಚರಿ
ಸ್ವಾಮೀಜಿಯುದೆಂದು ಬಲ್ಲೆ. ಬೆಳಗಿನ ಜಾವ ಏಳುತ್ತಿದ್ದಂತೆಯೆ ಪ್ರಾತಃ ವಿಧಿಗಳಾದ
ಮೇಲೆ ಯೋಗಾಸನಗಳನ್ನು ಮುಗಿಸಿ. ಪೂಜೆಗೆ ಹೊರಟರೇ ವರಿ ಮುಗಿಯಿತು
ಹರಿಹರನ ಪುಷ್ಪರಗಳೆ ಸೊಗಸನ್ನು ಮತ್ತೆ ಬಸವರಾಜದೇವರ ರಗಳೆಯಲ್ಲಿ ಬರುವ
ಬಸವಣ್ಣನವರ ಪೂಜಾ ವೈಖರಿಯ ವಿಶಿಷ್ಟತೆಯನ್ನು ಅರಿಯ ಬೇಕೆನ್ನಿಸಿದ್ದವರು
ಸ್ವಾಮೀಜಿಯವರ ಶಿವಪೂಜಾ ತತ್ಪರತೆಯನ್ನು ಒಮ್ಮೆ ನೋಡಬೇಕು. ಆನಂದ
ಮಯ:ರಾಗಿ ಶಿವಪೂಜೆ ನಿರತರಾಗಿ ಪೂಜೆ ದಿನದ ಕಾರ್ಯದ ಒಂದು ಪವಿತ್ರಭಾಗ
ಮುಗಿಸುವ ವೇಳೆಗೆ ಸರಿಯಾಗಿ ಬಟ್ಟಲಿನಲ್ಲಿ ಹಾಲಿನಲ್ಲಿ ಬೆರೆಸಿಟ್ಟ ಬೇವಿನರಸ ಸಿದ್ಧ
ವಾಗಿರುತ್ತದೆ. ಬೇವಿನ ಚೆಕ್ಕೆಯನ್ನು ಚೆನ್ನಾಗಿ ಕುದಿಸಿದ ನೀರಿಗೆ ಹಾಲು ಬೆರಸಿದರೆ
ಗುಲಾಬಿ ವರ್ಣಕ್ಕೆ ತಿರುಗುವುದು. ಅದನ್ನು ನೋಡಿದ ಭಕ್ತರೊಬ್ಬರು ಇದೇನೊ
ವಿಶೇಷ ರೀತಿಯ ಸಿಹಿಯಾದ ಪೇಯವಾಗಿರಬೇಕೆಂದು ಅಡಿಗೆಯವನನ್ನು ಅಂಗ
ಲಾಚಿ ಸ್ವಲ್ಪ ಗುಟುಕರಿಸುತ್ತಿದ್ದಂತೆ ಮುಖವೆಲ್ಲ ಹುಳ್ಳಗಾಗಿ ಹೋಯಿತಂತೆ. ಬೇವಿನ
ಕಹಿಯನ್ನು ಸವಿದಾಗ ಒಂದು ಲೋಟ ಆ ರಸವನ್ನು ಸೇವಿಸಿದಮೇಲೆ ಸೈಂಧ್ರಲವಣ
ಮಿಶ್ರಿತವಾದ (ಹುಳಿ ಕಾರಗಳಿಂದ ದೂರವಾದ) ಅಲ್ಪಾಹಾರವನ್ನು ಸ್ವೀಕರಿಸಿದಮೇಲೆ
ಕೌಪೀನವನ್ನು ಧರಿಸಿ ಹಣೆಯ ತ್ರಿಸ್ಕಂದ್ರ ಮರೆಯಾಗದಂತೆ ಕಾವಿಯ ಪೇಟವನ್ನು
ಧರಿಸಿದರೆ ದಿನದಕೆಲಸಕ್ಕೆ ಸಿದ್ಧವಾದಂತೆಯೇ. ನೇರ ಕಛೇರಿಗೆ ಬಂದು ಕುಳಿತು
ಬಿಡುತ್ತಾರೆ. ಅಷ್ಟು ಹೊತ್ತಿಗೆ ಸುಮಾರು ಬೆಳಗಿನಜಾವ ಐದೂವರೆ ಅಥವಾ ಆರು
ಗಂಟೆ ಅಲ್ಲಿಂದ ತಮ್ಮನ್ನು ನೋಡಲು ಬಂದವರಿಗೆ ದರ್ಶನ ಆಶೀರ್ವಾದಗಳು ಭಕ್ತಾ
ದಿಗಳು ಕಾಲೇಜುಗಳ ವ್ಯವಹಾರಕ್ಕೆ ಸಂಬಂಧಿಸಿದ ವಿಧವಿಧವಾದ ರೀತಿಯ ವಿದ್ಯಾ
ರ್ಥಿಗಳು ಪೋಷಕರು ಆಡಳಿತಗಾರರು ಮತ್ತು ಸಂದರ್ಶಕರು ಮಧ್ಯೆ ಮಧ್ಯೆ ಆಡಳಿ
ತಾತ್ಮಕ ಸಮಸ್ಯೆಗಳು ಅವುಗಳಿಗೆ ಪರಿಹಾರ ಚಕ್ಕುಗಳಿಗೆ ಸಹಿ ಸಲಹೆ ಸೂಚನೆಗಳು.



ಸಿದ್ದಗಂಗೆ ಸ್ವಾಮೀಜಿ ಇಂದು ಮಹಾನ್ ಸಂಸ್ಥೆಯಾಗಿದ್ದಾರೆ. ಅದಕ್ಕಿಂತಲೂ ಮುಖ್ಯವಾಗಿ ಮಾರ್ಗದರ್ಶಕ ಸತ್ವವಾಗಿದ್ದಾರೆ.

ಸುಮಾರು ಆರುದಶಕಗಳ ಹಿಂದೆ ಇದ್ದ ಸಿದ್ದಗಂಗೆಯನ್ನು ಕಂಡವರು ಈಗಿನ ಸಿದ್ಧಗಂಗೆಯ ಕ್ಷೇತ್ರವನ್ನು ನೋಡಿದರೆ ತಟ್ಟನೆ ನಂಬಲಾಗದು. ಈಗಿನ ಸಿದ್ಧಗಂಗಾ ಕ್ಷೇತ್ರ ಒಂದುಪವಾಡದಂತೆ ತೋರಿದರೆ ಬೆರಗಾಗಬೇಕಿಲ್ಲ.

ಉದ್ದಾನಶಿವಯೋಗಿಗಳ ಆಶೀರ್ವಾದ ಬಲದಿಂದ ಬಂದ ರುದ್ರಾಕ್ಷಿಸರ ಹಾಗೂ ಜೋಳಿಗೆಯನ್ನು ಪಡೆದ ಶ್ರೀ ಶಿವಣ್ಣನವರು, ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಾದದ್ದು ಬೇರೆಯಲ್ಲ. ಇಂದಿನ ಶ್ರೀ ಸಿದ್ಧಗಂಗಾ ಕ್ಷೇತ್ರ ಬೇರೆಯಲ್ಲ. ಇಲ್ಲಿರುವ ಕಟ್ಟಡಗಳು ಮೇಲೇಳುವಾಗ ಪೂಜ್ಯ ಸ್ವಾಮೀಜಿಯವರು ತಾವೂ ಇತರರ ಜೊತೆಕಲ್ಲು ಇಟ್ಟಿಗೆಗಳನ್ನು ಹೊತ್ತಿದ್ದಾರೆ. ಹೊಲವನ್ನು ಉತ್ತಿದ್ದಾರೆ, ಕಳೆ ಕಿತ್ತಿದ್ದಾರೆ, ಬೆಳೆ ಬೆಳೆದಿದ್ದಾರೆ. ಈಗ ಕಾಣುವ ಸಿದ್ದಗಂಗಾ ಕ್ಷೇತ್ರದ ಅಂಗುಲಂಗುಲದಲ್ಲಿಯೂ ಡಾ|| ಶಿವಕುಮಾರ ಮಹಾಸ್ವಾಮೀಜಿಗಳವರ ಶ್ರಮದ ಹಾಗೂ ತಪಸ್ಸಿನ ಫಲವನ್ನು ಕಾಣಬಹುದಾಗಿದೆ.

ಶ್ರೀ ಮಠದಲ್ಲಿ ನಡೆಯುವ ದಾಸೋಹ ಒಂದು ಐತಿಹಾಸಿಕ ಸಂಗತಿಯಾಗಿದೆ. ಎಷ್ಟೋ ದಶಕಗಳ ವರ್ಷಗಳ ಹಿಂದೆ ಹೊತ್ತಿಸಿದ ದಾಸೋಹದ ಅಡಿಗೆಮನೆಯ ಒಲೆಯಲ್ಲಿ ಸದಾ ಬೆಂಕಿ ಆರಿಲ್ಲ. ಅದು ನಿರಂತರವಾಗಿ ಉರಿದು ಜನರ ಹಸಿವಿನ ಬೆಂಕಿಯನ್ನು ತಣಿಸಿದೆ. ಇಲ್ಲಿಯ ದಾಸೋಹದ್ದೇ ವಿಶಿಷ್ಟತೆ. ಸಾರುಮಾಡುವ ದೊಡ್ಡಪಾತ್ರೆಯೊಳಕ್ಕೆ ಮತ್ತೆ ಮತ್ತೆ ನೀರು, ಹುಳಿ, ಕಾರ, ಉಪ್ಪು ಕಾಳುಗಳು ಸೊಪ್ಪು ತರಕಾರಿಗಳು ಸೇರುತ್ತಲೇ ಇರುತ್ತವೆ. ಉರಿಯುವ ಬೆಂಕಿ ಇದನ್ನು ಕುದಿಸುತ್ತಲೇ ಇರುತ್ತದೆ. ಪಕ್ಕದ ಇನ್ನೊಂದು ಕೊಪ್ಪರಿಗೆಯಲ್ಲಿ ಮುದ್ದೆಯ ಎಸರು ಕುದಿಯುತ್ತಲೇ ಇರುತ್ತದೆ. ಬಂದ ಭಕ್ತಾದಿಗಳು ದೊಡ್ಡಸೌಟುಗಳನ್ನು ಹಿಡಿದು ಉರಿಯುವ ಜೋಡೊಲೆಗಳ ಪಕ್ಕದಲ್ಲಿ ನಿಂತು ಸಾರನ್ನು ಬೆರೆಸುತ್ತಲೇ ಇರುತ್ತಾರೆ. ಪಕ್ಕದ ಕುದಿಯುವ ಮುದ್ದೆಎಸರಿನಲ್ಲಿ ಕವೆಗೋಲನಿಟ್ಟು ಮುದ್ದೆಯಾದ ಹಿಟ್ಟನ್ನು ತಿರುಗಿಸುತ್ತಾ ತಿರುಗಿಸುತ್ತಾ ಹದದ ಕೆಂಪು ಬರುತ್ತಿದ್ದಂತೆ ಪಕ್ಕಕ್ಕೆ ಆ ಬಿಸಿ ಬಿಸಿ ಹಿಟ್ಟನ್ನು ತೊಳೆದ ಕಲ್ಲುಚಪ್ಪಡಿಗಳ ಮೇಲೆ ಸುರಿಯುತ್ತಿದ್ದಂತೆ ಪಕ್ಕದ ಬೋಗುಣಿಯಲ್ಲಿ ಕೈಯೊದ್ದೆ ಮಾಡಿಕೊಳ್ಳುತ್ತಾ ಮುದ್ದೆಗಳನ್ನುಂಡೆ ಉಂಡೆಗಳಾಗಿ ಮಾಡಿ ಪಕ್ಕದಲ್ಲಿ ಸುರಿಯುತ್ತ ಹೋಗುತ್ತಾರೆ, ಮಠದವರಾರು ಅಡಿಗೆಯವರಾರು ದಾಸೊಹಕ್ಕೆ ಬಂದವರಾರು ಎಂಬ ಭೇದವಿಲ್ಲ. ಹಿರಿಯ ಅಡಿಗೆಯವನು ಮಾತ್ರ ಉಪ್ಪು ಕಾರ ಹುಳಿ ಹೆಚ್ಚು ಕಡಿಮೆಯಾಗದಂತೆ ಎಚ್ಚರ ವಹಿಸಲು ನಿಂತಿರುತ್ತಾನೆ. ಹಾಗೆ

ತ್ರಿವಿಧದ
ಡಾ || ಶ್ರೀ
ಜನ್ಮದಿನೊ



ಕುರುಡರ ಬಾಳಿಗೆ
ವಿಶ್ವದಾಖಲಾತಿ



ಸಿದ್ಧಗಂಗ
ಮಠದ ಹಳೆ

ಮುದ್ದೆ ಕೂಡ ಗಂಟುಗೊಳ್ಳದ ಹಾಗೆ, ಹದಮೀರದ ಹಾಗೆ, ಉಂಡೆಗೊಳ್ಳದಹಾಗೆ ನಡೆಯುವುದನ್ನು ಕಣ್ಣಂಚಿನಲ್ಲಿ ನಿರ್ವಹಿಸುತ್ತಿರುತ್ತಾನೆ, ನೀವು ಸ್ವಾಮೀಜಿಯವರನ್ನು ದರ್ಶನ ಮಾಡಿದರೆನ್ನಿ ಅವರ ಮೊದಲಮಾತು ನಿಮ್ಮ ಪ್ರಸಾದವಾಯಿತೆ ? ಮತ್ತೆ ಮತ್ತೆ ಕ್ಷೇತ್ರಕ್ಕೆ ಬರುವ ಭಕ್ತಾದಿಗಳೆಲ್ಲರ ನೆನಪು ಇಟ್ಟು ಹೆಸರೆತ್ತಿ ಮಾತನಾಡು ವುದು ಸ್ವಾಮೀಜಿಯವರ ಕ್ರಮ. ಹೊಸದಾಗಿ ಬಂದವರನ್ನು ತಟ್ಟನೆ ಗುರುತಿಸಿ ನೀವು ಎತ್ತಕಡೆಯವರು ಮಳೆ ಬೆಳೆ ಹೇಗಿದೆ ಎನ್ನುವ ಆ ಅಕ್ಕರೆಯನ್ನು ಗಮನಿಸ ಬೇಕು. ಇಡೀ ಜಗತ್ತನ್ನೇ ಪ್ರೀತಿಸುವಂತ ದೊಡ್ಡ ಹೃದಯ ಅದು.

ಇಂದು ಶ್ರೀ ಕ್ಷೇತ್ರ ವಿದ್ಯೆಗಾಗಿ ಮಾಡಿರುವ ಸೇವೆ ಬಹುಮುಖವಾದುದು. ಅಲ್ಲಿರುವ ಸಂಸ್ಕೃತ ಶಾಲೆ ಈಗ ಸಂಸ್ಕೃತದ ಕಾಲೇಜಾಗಿ ಸಂಸ್ಕೃತ ಜ್ಞಾನದ ಮುಕ್ತ ವಿಶ್ವ ವಿದ್ಯಾಲಯದಂತಿದೆ. ಪ್ರೌಢಶಾಲೆಗಳು, ಕಾಲೇಜುಗಳು ಶಿಕ್ಷಣದ ಕಾಲೇಜುಗಳು ಇಂಜಿನಿಯರಿಂಗ್ ಕಾಲೇಜು ಹೀಗೆ ಬಹುರೂಪದಲ್ಲಿ ಹರಡಿಕೊಂಡಿರುವ ಶಿಕ್ಷಣಸಂಸ್ಥೆ ಗಳು ಇಂದು ಒಂದು ವಿಶ್ವವಿದ್ಯಾಲಯವಾಗಿ ನಿಲ್ಲಬಲ್ಲಷ್ಟು ಗಟ್ಟಿ ನೆಲಗಟ್ಟನ್ನು ಪಡೆದಿವೆ.

ಒಂದು ಕಡೆ ಅನ್ನದಾನ ಇನ್ನೊಂದುಕಡೆ ವಿದ್ಯಾದಾನ ಎರಡನ್ನೂ ನಡೆ ಸುತ್ತಿರುವ ಶ್ರೀಗಳವರು ಅದಕ್ಕಿಂತ ಹೆಚ್ಚಿನ ಮಹತ್ವದ ಕಾರ್ಯವೊಂದನ್ನು ಈಗ್ಗೆ ಹತ್ತು ವರ್ಷಗಳಿಗೆ ಹಿಂದೆಯೇ ಕಾರ್ಯ ರೂಪಕ್ಕೆ ತರಲು ಯೋಚಿಸಿದರು. ಅದೇ ಗ್ರಾಮಾಂತರ ಬಸವಜಯಂತಿ ಕಾರ್ಯಕ್ರಮ. ಬಸವಣ್ಣನವರ ಬದುಕಿನ ಎತ್ತರಕ್ಕೆ ಏರಿಹೋದ ಶ್ರೀಗಳವರು ಅಂಥ ವ್ಯಕ್ತಿತ್ವದ ಪರಿಚಯವನ್ನು ಗ್ರಾಮಾಂತರದ ಜನ ಸಾಮಾನ್ಯರೆಲ್ಲರಿಗೂ ಮಾಡಿಕೊಡುವ ಪ್ರಯತ್ನ ಮಾಡಿದ್ದು ಮಹತ್ತರವಾದದ್ದು ಈ ಬಸವ ಜಯಂತಿಯ ಸ್ಥೂಲ ರೂಪರೇಷೆಗಳನ್ನು ಗಮನಿಸಿದರೆ ಈಯೋಜನೆಯ ಹಿಂದಿರುವ ಶ್ರೀಗಳವರ ಮಹಾದರ್ಶನ ಯಾರನ್ನಾದರೂ ಅಚ್ಚರಿಗೊಳಿಸುತ್ತದೆ. ಯಾರಾದರೂ ಭಕ್ತರು ಶಿವಪೂಜೆಗೆ ಕರೆದರೆ ಅದೂ ಗ್ರಾಮಾಂತರ ಪ್ರದೇಶದಿಂದ ಭಕ್ತರು ಕರೆದರೂ ಸದಾ ಓಗೊಡುವ ಶ್ರೀಗಳವರು ಅಂದು ಬೆಳಗಿನಿಂದ ಬಸವ ಣ್ಣನವರ ಬಗ್ಗೆ ಚೆನ್ನಾಗಿ ಬಲ್ಲವರೂ ಹಾಗೆಯೇ ಜನರ ಮನಸ್ಸಿಗೆ ಮುಟ್ಟುವಂತೆ ಆ ವಿಚಾರಗಳನ್ನು ಮಂಡಿಸಬಲ್ಲವರೂ ಆದ ಸಾಹಿತಿ ವಿದ್ವಜ್ಜನರನ್ನು ಆಹ್ವಾನಿಸಿ ಬಸವಣ್ಣನವರ ಬದುಕಿನ ವಿವಿಧ ಮುಖಗಳ ಪರಿಚಯ ಅನುವು ಮಾಡಿಕೊಡು ತ್ತಾರೆ. ಅಷ್ಟೇ ಅಲ್ಲ ಆ ಸಂದರ್ಭದಲ್ಲಿ ಮುಖ್ಯವಾಗಿ ಡಾ|| ತಿಪ್ಪೇರುದ್ರಸ್ವಾಮಿ ಯವರು ಬರೆದಿರುವ " ಕರ್ತಾರನ ಕಮ್ಮಟ " ಎಂಬ ಬಸವಣ್ಣನವರ ಬದುಕನ್ನು ಕುರಿತ ಬೃಹತ್ ಗ್ರಂಥವನ್ನು ಅತ್ಯಂತ ಸುಲಭ ಬೆಲೆಗೆ ಅಂದರೆ 25 ರೂಪಾಯಿ ಗಳಿಗೆ ಮಾರಾಟ ಮಾಡುವ ವ್ಯವಸ್ಥೆಯನ್ನು ಮಾಡಿದ್ದಾರೆ. ಅದಕ್ಕಿಂತ ಮುಖ್ಯ ವಾದದ್ದು ಎಂದರೆ ಅಂದು ರಾತ್ರಿ ಬಸವಣ್ಣನವರ ಬದುಕನ್ನು ಕುರಿತ ನಾಟಕ



ಪ್ರದರ್ಶನ. ಈ ಪ್ರದರ್ಶನಕ್ಕಾಗಿ ಶ್ರೀ ಮಠವೇ ಒಂದು ನಟವರ್ಗವನ್ನು ರೂಪಿಸಿದೆ. ರಂಗ ಪರಿಕರಗಳನ್ನು ಸಿದ್ಧಪಡಿಸಿದೆ. ಮತ್ತೆ ಒಂದು ಅರ್ಥದಲ್ಲಿ ಇದನ್ನು ಶ್ರೀ ಸಿದ್ಧಲಿಂಗೇಶ್ವರ ನಾಟಕಮಂಡಳಿ ಎಂದರೂ ಆದೀತು. ಆಶ್ಚರ್ಯ ಎಂದರೆ ಬೆಳಗಿನಿಂದ ಬಸವಣ್ಣನವರನ್ನು ಕುರಿತ ವಿಚಾರ ಗೋಷ್ಠಿಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡ ಶ್ರೀಗಳವರು ರಾತ್ರಿ 10 ಗಂಟೆಗೆ ಆರಂಭವಾಗಿ ಬೆಳಕು ಹರಿಯುವವರೆಗೂ ನಡೆಯುವ ಈ ನಾಟಕವನ್ನು ತಾವೇ ಮುಂದೆಕುಳಿತು ನೋಡುವುದು. ಅಷ್ಟೇ ಅಲ್ಲ ನಾಟಕ ಮುಗಿದಾದಮೇಲೆ ಅಭಿನಯವನ್ನು ಕುರಿತು ಬೇರೆಯವರು ಹೇಳಿದ ಅಭಿಪ್ರಾಯ ಹಾಗೂ ವಿಮರ್ಶೆಗಳ ಹಿನ್ನೆಲೆಯಲ್ಲಿ ತಮಗೂ ಗೋಚರವಾದ ಕೆಲವು ಮಾರ್ಪಾಡು ಗಳು ಹಾಗೂ ಬದಲಾವಣೆಗಳನ್ನು ಕುರಿತು ನಿರ್ದೇಶನ ನೀಡಿ ಮತ್ತೆ ಅಂದಿನ ದಿನ ಚರಿಯನ್ನು ಪ್ರಾರಂಭಿಸುವರು.

ಇಡೀದಿನ ಹೀಗೆ ಒಂದಲ್ಲ ಒಂದು ಸಮಾಜ ಹಿತಕಾರ್ಯದಲ್ಲಿ ಮನ ಸ್ಸನ್ನು ತೊಡಗಿಸಿಕೊಂಡಿರುವಾಗ ಈ ವ್ಯಕ್ತಿತ್ವಕ್ಕೆ ಬಿಡುವೆಲ್ಲಿ ?

ಶಿವಯೋಗಿಯ ಶರೀರಂ ವೃಥಾ ಸವೆಯಲಾಗದು ಎಂಬುದು ಈ ಬದುಕಿನ ಧ್ಯೇಯ ವಿದ್ದಂತಿದೆ. ಕಾಯಕವೇ ಕೈಲಾಸ ಎಂಬ ಮಾತನ್ನು ಉಸಿರಾಡುವ ಈ ಜೀವಕ್ಕೆ ಇಡೀ ಬದುಕೆ ಒಂದು ಪೂಜೆಯಂತಿರುವುದನ್ನು ಕಂಡಾಗ ಮನಸ್ಸು ಗೌರ ವಪೂರ್ವಕವಾಗಿ ನಮನ ಬಯಸುತ್ತದೆ.

ಈಗ ಎಂಬತ್ತ ನಾಲ್ಕನೆಯ ವರ್ಷಕ್ಕೆ ಕಾಲಿಟ್ಟಿರುವ ಈ ಎತ್ತರದ ಜೀವ ವನ್ನು ನೋಡುವಾಗ ಹೆಮ್ಮೆಯಾಗುತ್ತದೆ. ಅವರು ಅಲ್ಲಮಪ್ರಭುವೂ ಅಲ್ಲ ಬಸವ ಣ್ಣನು ಅಲ್ಲ, ಸಿದ್ಧರಾಮನೂ ಅಲ್ಲ. ಸಿದ್ಧಗಂಗೆಯ ಬೆಳಕು ಶ್ರೀ ಶಿವಕುಮಾರ ಮಹಾಸ್ವಾಮಿಗಳೆಂದೇ ಜನರ ಹೃದಯದಲ್ಲಿ ರಾರಾಜಿಸುತ್ತಿರುವ ಅಪೂರ್ವಚೇತನ.

ಮಹಾಪುರುಷರೆಂದರೆ ಪವಾಡಪುರುಷರೆಂದೇ ಭ್ರಮಿಸುವ ಜನರೆದುರಿಗೆ ಶ್ರೀ ಶಿವಕುಮಾರ ಮಹಾ ಸ್ವಾಮಿಗಳೇ ಒಂದು ಪವಾಡವಾಗಿ ಕಾಣುತ್ತಾರೆ. ಅವರ ವಿದ್ವತ್ತು, ಸಾಮಾಜಿಕ ಸೇವೆ, ತತ್ವಗಳನ್ನು ಕುರಿತು ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್, ಸಿದ್ದವನ ಹಳ್ಳಿ ನಿಜಲಿಂಗಪ್ಪ, ಆರ್.ಆರ್. ದಿವಾಕರ್, ಡಾ|| ರಂ. ಶ್ರೀ ಮುಗಳಿ, ವಿ.ವಿ. ಗಿರಿ, ಎಸ್.ಎಸ್. ಮಾಳವಾಡ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಮೊರಾರ್ಜಿ ದೇಸಾಯಿ ಇಂಥವರು ಹೇಳುವ ಮಾತುಗಳನ್ನು ಗಮನಿಸಿದರೆ ಸರಳವೆಂಬಂತೆ ಕಾಣುವ ಶ್ರೀಗಳವರ ವ್ಯಕ್ತಿತ್ವದ ಸಂಕೀರ್ಣತೆ ಹಾಗೂ ಎತ್ತರದ ಅರಿವಾದೀತೇನೋ.

ತ್ರಿವಿಧದಾ
ಡಾ || ಶ್ರೀ
ಜನ್ಮದಿನೋ



ಕುರುಡರ ಬಾಳಿಗೆ
ವಿಶ್ವದಾಖಲಾತಿ "

ಸಿದ್ಧಗಂಗ
ಮಠದ ಹಳೆ

ಅವರೇ ಒಮ್ಮೆ ಶರೀರ ಧರ್ಮದ ಬಗ್ಗೆ ಹೇಳಿರುವ ಈ ಮಾತುಗಳನ್ನು ಗಮನಿಸಿ; ಜೀವನದ ಸಾರ್ಥಕತೆಯನ್ನು ಪರಿಶುದ್ಧ ಕಾಯಕದಿಂದಲೇ ಪಡೆಯಬೇಕು. ನಮ್ಮ ಧರ್ಮಗ್ರಂಥಗಳು ಕಾಯಕ ರಹಿತ ಬಾಳಿಗೂ ಮಹತ್ವವನ್ನು ಕೊಟ್ಟೇಇಲ್ಲ. ಅಂಥ ಕಾಯಕಶೀಲ ರೈತನ ಬಗೆಗೆ ಪ್ರತಿಯೊಬ್ಬ ಇನ್ನಿತರ ಕಾಯಕದವರು ಅಪಾರ ಗೌರವವನ್ನು ತಾಳಬೇಕು. ನಾವು ಏನೆಲ್ಲವನ್ನೂ ಉತ್ಪಾದಿಸಬಹುದು. ಅದರೆ ಅನ್ನದ ಉತ್ಪಾದನೆ ಕುಂಠಿತವಾದಾಗ ಉಳಿದೆಲ್ಲ ಉತ್ಪಾದನೆಗಳಿಗೇನು ಬೆಲೆ? ಸುಖ ಜೀವನದ ಅರ್ಥ ಬೇಸಾಯಗಾರನಿಗೆ ಮಾತ್ರ ಗೊತ್ತು. ಹಳ್ಳಿ ಭೋಗ ಜೀವನ ಕೇಳಿಲ್ಲ. ಅಧಿಕಾರ ಸಂಪತ್ತು ಮತ್ತು ಜೀವನದ ದಾಹಗಳು ಮಾನವ ನನ್ನು ದಾನವನನ್ನಾಗಿ ಮಾಡುವ ಪರಿಸ್ಥಿತಿ ಹಳ್ಳಿಗಳಲ್ಲಿಲ್ಲ. ಪ್ರಾಚೀನ ಕಾಲದಲ್ಲಿ ಸೇವೆಯೇ ಅರ್ಥವ್ಯವಸ್ಥೆಯಾಗಿತ್ತು. ವಸ್ತುಗಳು ವಿನಿಮಯಕ್ಕೆ ಮಾಧ್ಯಮವಾಗಿದ್ದವು. ಕಾರಣ ಗ್ರಾಮ ಜೀವನ ಪ್ರಾಚೀನ ಧರ್ಮವನ್ನು ಮರೆಯದೆ ಕರ್ತವ್ಯಪ್ರಜ್ಞೆ ಕ್ರಿಯಾಶೀಲತೆಯನ್ನು ಬೆಳೆಸಿಕೊಳ್ಳಬೇಕು.

ಶರೀರವನ್ನು ಕುರಿತು ಹೇಳುತ್ತಿರುವ ಮಾತುಗಳ ಶಕ್ತಿ ವಿಶಿಷ್ಟಾದ್ವೈತದ ವಿಶ್ಲೇಷಣೆಯನ್ನು ನಡೆಸುವ ಆ ಮಾತುಗಳು ಧ್ವನಿಸುವ ಒಡಕಿನ ವಾಹಿಣಿ ಶ್ರೀಗಳವರ ಬದುಕಿನ ದರ್ಶನ ಎಂದರೂ ಸರಿಯೇ. ಉದ್ದಾನ ಶಿವಯೋಗಿಗಳು ಕಂಡ ಕನಸನ್ನು ನನಸನ್ನಾಗಿ ಮಾಡಿ ಸಿದ್ಧಗಂಗೆಯನ್ನು ಶ್ರೀ ಸಿದ್ಧಗಂಗಾ ಕ್ಷೇತ್ರವಾಗಿ ಮಾಡಿ ಇದನ್ನು ಅನ್ನದಾಸೋಹ ಹಾಗೂ ಜ್ಞಾನದಾಸೋಹಗಳ ಮೂಲಸೆಲೆಯಾಗಿ ಮಾಡಿದ ಶ್ರೀ ಶ್ರೀಗಳವರು ನೂರಾರು ವರ್ಷ ಬಾಳಲಿ ಅವರ ತಪಸ್ಸಿನ ಹಾಗೂ ದರ್ಶನದ ಫಲ ಕನ್ನಡಿಗರಿಗೆ ಪಾತ್ರವಾಗಲಿ ಎಂದು ಪ್ರಾರ್ಥಿಸೋಣ.

---

**ಅಜೀವ ಸದಸ್ಯರುಗಳಲ್ಲಿ ಒಂದು ಮನವಿ.**

ಸಿದ್ಧಗಂಗಾ ಪತ್ರಿಕೆಯ ಅನೇಕ ಅಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಸಂಚಿಕೆಗಳು ಕೆಲವು ಸದಸ್ಯರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮ ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ ಕಳುಹಿಸಿ ಕೊಡುವುದರ ಮುಖೇನ "ಸಿದ್ಧಗಂಗಾ" ನಿಮಗೆ ಕ್ರಮವಾಗಿ ತಲುಪಲು ಸಹಕರಿಸಬೇಕಾಗಿ ಪ್ರಾರ್ಥನೆ. **ತಮ್ಮ ಸದಸ್ಯತ್ವದ ನಂಬರನ್ನು ತಪ್ಪದೇ ತಿಳಿಸಿರಿ.**

ಪ್ರಕಾಶಕರು.

---



# ಆಧುನಿಕ ಚಿಂತಕ ಬಸವಣ್ಣ

ಕೃಪೆ: ಶರಣ ಧರ್ಮ

ದೇಹಾರವ ಮಾಡುವ ಅಣ್ಣಗಳಿರಾ, ಅಣ್ಣಗಳಿರಾ,
ಒಂದು ತುತ್ತು ಆಹಾರವನಿಕ್ಕಿರಯ್ಯಾ,
ದೇಹಾರಕ್ಕೆ ಆಹಾರವೇ ನಿಚ್ಚಣಿಕೆ,
ದೇಹಾರವ ಮಾಡುತ್ತೆ ಆಹಾರವನಿಕ್ಕದಿರ್ದೊಡೆ,
ಆಹಾರವಿಲ್ಲೆಂದನಂಬಿಗರ ಚೌಡಯ್ಯ,

— ಅಂಬಿಗರಚೌಡಯ್ಯ

**ಕನ್ನಡದ ಗ್ರಾಮೀಣ ಮಹಿಳೆ ತನ್ನೊಂದು ಪದದಲ್ಲಿ ಈ ರೀತಿ ವರ್ಣನೆ ಮಾಡಿದ್ದಾಳೆ**

"ಬಸವಣ್ಣ ಬರುವಾಗ ಬಿಸಿಲು ಬೆಳದಿಂಗಳು
ದುಂಡು ಮಲ್ಲಿಗೆ ಅರಳ್ಯಾವ"
ಯಾಲಕ್ಕಿ ಗೊನಿ ಬಾಗಿ ಹಾಲು ಸುರಿದಾವ!

ಬಸವಣ್ಣನವರು ಜನಿಸುವುದಕ್ಕಿಂತ ಮೊದಲು ಭಾರತವು, ವೈದಿಕರ, ಪುರೋಹಿತರ ಪೂಜಾರಿಗಳ ಹಿಡಿತದಲ್ಲಿ ಸಿಕ್ಕು ಬಿಸಿಲಿನ ಬೇಗೆಯಿಂದ ಒದ್ದಾಡುತ್ತಿತ್ತು. ಧರ್ಮದ, ದೇವರ ಹೆಸರಿನಲ್ಲಿ ಗೊಳ್ಳಿ, ಹೊಡೆಯುವ ರಕ್ತ ಬೀಜಾಸುರರ ಶೋಷಣೆ ತಡೆಗಟ್ಟಲೆಂದೆ ಮೊದಲು ಬಸವಣ್ಣ 'ದೇವನೊಬ್ಬ ನಾಮ ಹಲವು' ಎಂದು ಸಾರಿದರು. ಇದರಿಂದ ಕೋಟ್ಯಾನುಕೋಟಿ ದೇವರುಗಳ ಆರಾಧನೆ ನಡೆಸಿ ಉತ್ಸವ, ಪೂಜೆ, ಯಜ್ಞ, ಹೋಮಗಳನ್ನು ನಡೆಸುವ ಕಾರ್ಯಗಳಿಗೆ ಕೊನೆ ಹೇಳಲಾಯಿತು. ಇಡೀ ಜಗತ್ತನ್ನೇ ಬೆರಗುಗೊಳಿಸುವ ಅತ್ಯಂತ ಸರಳರೂಪದಲ್ಲಿ ವಿಶ್ವದಾಕಾರವನ್ನು ಸಮಸ್ತ ಜೀವರಾಶಿಗಳನ್ನು ಪೂಜಿಸುವ "ಇಷ್ಟಲಿಂಗ"ವೆಂಬ ಸಾಧನವನ್ನು ಜನತೆಗೆ ನೀಡಿದರು. ಧಾರ್ಮಿಕವಾಗಿ ವಂಚಿತರಾದ ದಲಿತ-ದುರ್ಬಲರು, ಸ್ತ್ರೀಕುಲವು ಇಷ್ಟಲಿಂಗವ ಧರಿಸಿ ಸಮಾನತೆಯನ್ನು ಸಾಧಿಸಿದರು. ಇದರೊಂದಿಗೆ 'ಕಾಯಕ'ವೆಂಬ ಮಂತ್ರವ ನೀಡಿ, ಪ್ರತಿಯೊಬ್ಬರಿಗೂ ದುಡಿದುತಿನ್ನುವ ಪದ್ಧತಿಯನ್ನು ಜಗತ್ತಿಗೆ ಕಲಿಸಿಕೊಟ್ಟ ಮಹಾಮಾನವ ಬಸವಣ್ಣ.

ತ್ರಿವಿಧದ
ಡಾ || ಶ್ರೀ
ಜನ್ಮದಿನೋ



ಕುರುಡರ ಬಾಳಿಗೆ
ವಿಶ್ವದಾಖಲಾತಿ



ಸಿದ್ಧಗಂಗ
ಮಠದ ಹಳೆಯ

ಸಿದ್ಧಾಂತವನ್ನು ಬೋಧಿಸುತ್ತಾ ವಿಷಮ ಸಮಾಜವನ್ನು ರಚಿಸಿ, ಜಾತಿ, ಸೂತಕ, ತಿಥಿ, ಮುಹೂರ್ತ, ಶಕುನ, ಕರ್ಮ ಜೋತಿಷ್ಯ, ರಮಲ ವಿದ್ಯೆಯಂತಹ ಹಲವಾರು ಮೌಢ್ಯ ವಿಚಾರಗಳನ್ನು ಜನತೆಯ ಮುಂದಿಟ್ಟು ತಮ್ಮ ಬದುಕನ್ನು ಸಾಗಿಸುತ್ತಿರುವ ಪುರೋಹಿತವರ್ಗಕ್ಕೆ ಅಗಾಧವಾದ ಪೆಟ್ಟು ಬಿತ್ತು. "ಕರ್ಣದಲ್ಲಿ" ಜನಿಸಿದವರುಂಟೆ?" ಎಂಬ ಪ್ರಶ್ನೆಯನ್ನು ಬಸವಣ್ಣನವರು ಕೇಳಿ ಇಡೀ ವ್ಯವಸ್ಥೆಯನ್ನು ಅಲುಗಾಡಿಸಿದ್ದಾರೆ. ದಲಿತರ ಕಂದಾಚರಣೆ ಮೌಢ್ಯವನ್ನೇ ಅಸ್ತ್ರವನ್ನಾಗಿಸಿ-ಕೊಂಡು ಉಚ್ಚಕುಲದ ಜನತೆ, ಪುರೋಹಿತರು ದಲಿತರನ್ನು ದುರ್ಬಲರನ್ನು ತಮ್ಮ ಕೆಲಸಕ್ಕೆ ಪಶುಗಳಂತೆ ದುಡಿಸಿಕೊಳ್ಳುತ್ತಿದ್ದರು. ಬಡತನಕ್ಕೆ ಹಿಂದಿನ ಜನ್ಮದ ಪಾಪವೇ ಕಾರಣ ಮುಂದಿನ ಜನ್ಮದಲ್ಲಿ ಮತ್ತೆ ಒಳ್ಳೆಯದನ್ನು ಕಾಣಬೇಕಾದರೆ ಈ ಜನ್ಮದಲ್ಲಿ ನಿಷ್ಠೆಯಿಂದ ದುಡಿಯಬೇಕು ಎನ್ನುವುದು ಅವರ ಬೋಧೆಯಾಗಿತ್ತು. ವೇದಶಾಸ್ತ್ರ ಸ್ಮೃತಿಗಳ ಹುರುಳಿಲ್ಲದ ತತ್ವಗಳಿಂದ ಬೇಸತ್ತ ಬಸವಣ್ಣನವರು

ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸುತ್ತಿದೆ
ವೇದ ಘನವೆಂಬೆನೆ? ಪ್ರಾಣಿವಧೆಯ ಹೇಳುತ್ತಿದೆ
ಸ್ಮೃತಿಘನವೆಂಬೆನೆ? ಮುಂದಿಟ್ಟರಸುತ್ತಿದೆ

ಎಂದು ನಿಷ್ಠುರವಾಗಿ ವೇದ, ಶಾಸ್ತ್ರಗಳ ದ್ವಂದ್ವ ನೀತಿಯನ್ನು ಲೋಪಗಳನ್ನು ಖಂಡಿಸಿದ್ದಾರೆ, ಬಸವಣ್ಣನವರು ತಮ್ಮ ಸುತ್ತಲಿನ ಸಮಾಜವನ್ನು ನೋಡುವ ಪರಿ, ರೀತಿ ಅತ್ಯಂತ ಆಧುನಿಕ ವಿಚಾರಗಳಿಂದ ಕೂಡಿತ್ತು. ಪ್ರತಿಯೊಂದು ವಿಚಾರವನ್ನು ಶರಣರ ಮುಂದೆ ಮಂಡಿಸಿ ಸತ್ಯಾಸತ್ಯತೆಯ ಆಧಾರದ ಮೇಲೆ ಚಿಂತಿಸಿ, ಚರ್ಚಿಸಿ, ಪರಿಹಾರವನ್ನು ಕಂಡುಕೊಳ್ಳುತ್ತಿದ್ದರು.

ವರ್ಣಾಶ್ರಮವು ಮೂಲತಃವಾಗಿ ಒಳ್ಳೆಯ ಕಾರ್ಯಕ್ಕೆ ಬಂದಿದ್ದರೂ ಮುಂದೆ ಅದು ಸಮಾಜಕ್ಕೆ ಬಿಡಿಸಲಾರದ ಘಾತುಕವಾದ ರೋಗವಾಗಿ ಪರಿಣಮಿಸಿತು. ವರ್ಣಾಶ್ರಮದ ಬೇಗೆಗೆ ಮನುಷ್ಯರು ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುವ ಕಾಲ ಬಂದೊದಗಿತ್ತು. ಜಾತಿ ಕುಲವೆಂಬವುಗಳೇ ಆಯಾ ವೃತ್ತಿಯ ಮೇಲೆ ಬಂದವು.

ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ
ಹಾಸನಿಕ್ಕಿ ಸಾಲಿಗನಾದ ವೇದವನ್ನೋದಿ ಹಾರುವನಾದ

ಎಂದು ಬಸವಣ್ಣನವರು, ಜಾತಿಗಳು ಕೇವಲ ಅವರವರ ಉದ್ಯೋಗದ ಮೇಲೆ ಬಂದಿವೆ ಹೊರತು ಹುಟ್ಟಿನಿಂದಲ್ಲ ಎಂದು ಸಾರಿದರು.



ಬಸವಣ್ಣನವರು ಬ್ರಾಹ್ಮಣರಾಗಿ ಜನಿಸಿದ್ದರೂ ಅವರ ಆಧುನಿಕ ವಿಚಾರಗಳಿಂದ, ಬದುಕಿನ ಮೌಲ್ಯಗಳಕಡೆ ಗಮನ ಹರಿಸಿ, ತುಳಿತಕ್ಕೆ ಒಳಗಾದ ಜನಾಂಗಕ್ಕೆ ನ್ಯಾಯ ಒದಗಿಸಿಕೊಟ್ಟ ಧೀಮಂತ ನಾಯಕ. ಬಸವಣ್ಣನವರು ಸದಾ ತಮ್ಮನ್ನು ಸಮಾಜದ ಅತ್ಯಂತ ಕಿರಿಯ ವ್ಯಕ್ತಿ ಎಂದು ತಿಳಿದಿದ್ದಾರೆ.

ಅಪ್ಪನು ನಮ್ಮ ಮಾದಾರ ಚೆನ್ನಯ್ಯ
ಬೊಪ್ಪನು ನಮ್ಮ ಡೋಹಾರ ಕಕ್ಕಯ್ಯ
ಚಿಕ್ಕಯ್ಯ ನಮ್ಮಯ್ಯ ಕಾಣಯ್ಯ
ಅಣ್ಣನು ನಮ್ಮ ಕಿನ್ನರಿ ಬ್ರಹ್ಮಯ್ಯ

ಎಂದು ಹೇಳುತ್ತಾ ಶೋಷಣೆಗೆ ಒಳಗಿ ಉಸಿರು ಬಿಡಲು ಬಾರದ ಜನಾಂಗವನ್ನು ಅಪ್ಪ, ಬೊಪ್ಪ, ಅಣ್ಣ ಎಂದು ಸಂಭೋದಿಸಿ ವರ್ಣಾಶ್ರಮವನ್ನು ದೃಢ ಸಂಕಲ್ಪ, ದಿಟ್ಟ ಹೆಜ್ಜೆಯು ವೈದಿಕರನ್ನು ನಡುಗಿಸಿತು, ಜಾತಿವಾದಿಗಳು ಹೆದರಿದರು. ಸಮಾ-ನತೆಯ ಕನಸು ಕಂಡ ಬಸವಣ್ಣ ಸನಾತನಿಗಳ, ವೈದಿಕರ ಶೋಷಣೆಯ ಅಂತ್ಯ ಬಯಸಿದರು.

ದೇವ ಸಹಿತ ಮನೆಗೆ ಬಂದರೆ
ಕಾಯಕವಾವುವುದೆಂದು ಬೆಸಗೊಂಡರೆ
ನಿಮ್ಮಾಣೆ, ನಿಮ್ಮ ಪುರಾತರಾಣೆ, ತಲೆದಂಡ
ತಲೆದಂಡ, ಕೂಡಲಸಂಗಮದೇವಾ
ಭಕ್ತರ ಕುಲವನರಸಿದರೆ ನಿಮ್ಮ ರಾಣಿವಾಸದಾಣೆ

ಭಕ್ತರ ಕಾಯಕ, ಕುಲವನ್ನು ಏಕೆ ಕೇಳಬೇಕೆನ್ನುವುದು ಅವರ ವಿಚಾರ, ವರ್ಣ ಸಮರವನ್ನು ಸಾರಿದ ಬಸವಣ್ಣ ವರ್ಗ ಸಮರವನ್ನು ಸಾರಿದ. ಬಟ್ಟೆ ಮಡಿ ಮಾಡುವ ಮಡಿವಾಳನ ಕಾಯಕಕ್ಕೆ ಸಿಗುವ ಗೌರವ ದೋಣಿ ನಡೆಸುವ ಅಂಬಿಗನ ಕಾಯಕಕ್ಕೆ ಇದೆ. ಪ್ರಧಾನಿಯಾದ ತಮ್ಮ ಕಾಯಕಕ್ಕೆ ದೊರೆಯುವ ಮನ್ನಣೆ: ಸಮಗಾರ ಹರಳಯ್ಯನ ಕಾಯಕಕ್ಕೆ ಸಮಾನ ಎಂದು ಅರಿವು ಮಾಡಿಕೊಟ್ಟರು. ಕಾಯಕವು ಬಸವಣ್ಣನವರ ದೃಷ್ಟಿಯಲ್ಲಿ ಲಿಂಗಪೂಜೆಗಿಂತ. ದೇವರ ದರ್ಶನಕ್ಕಿಂತ ಮಹತ್ವವಾಗಿದೆ. ●

# ವಿಜ್ಞಾನ ಮತ್ತು ಆಧ್ಯಾತ್ಮ

ಶ್ರೀ ಎಚ್. ಎಸ್. ನರಸಿಂಹಜೀಯರ್, ಶ್ರೀ ಬಸವೇಶ್ವರ ಇಂಗ್ಲಿಷ್‌ಶಾಲೆ, ತುಮಕೂರು-2

ಭೂಮಿಯ ಮೇಲೆ ಸೃಷ್ಟಿಯಾದ ಜೀವಿಗಳ ಚರಿತ್ರೆಯನ್ನು ಒಂದು ನೂರು ವರ್ಷಗಳ ಕಾಲವೆಂದು ನಾವು ಪರಿಗಣಿಸಿದಲ್ಲಿ, ಮಾನವನ ಇತಿಹಾಸವು ಇದರಲ್ಲಿ ಕೇವಲ ಒಂದು ನೂರು ನಿಮಿಷಗಳಷ್ಟು ಮಾತ್ರ. ವಿಜ್ಞಾನದ ಬೆಳವಣಿಗೆಯು ಇದರಲ್ಲಿ ಒಂದೆರಡು ಸೆಕೆಂಡುಗಳಷ್ಟು ಕಾಲದ್ದು. ಈ ಅಲ್ಪ ಅವಧಿಯಲ್ಲಿಯೇ ವಿಜ ಪ್ರಕೃತಿಯ ಅನೇಕ ರಹಸ್ಯಗಳನ್ನು ಹೊರಗೆಳೆದು ಮಾನವನ ಜೀವನದ ಸುಖ ಸಂಪತ್ತುಗಳಿಗೆ ಅಮೂಲ್ಯವಾದ ಕೊಡುಗೆಗಳನ್ನು ಕೊಟ್ಟಿದೆ. ಈ ಯುಗವನ್ನು 'Heroic Age of inventions,' 'Age of the Atom,' Space Age, Jet age, Computer revolution-ಎಂದೆಲ್ಲಾ ಹೊಗಳಿದ್ದಾರೆ. ಇದನ್ನು ಯಾರೂ ಅಲ್ಲಗಳೆಯುವಂತಿಲ್ಲ.

**'ಹಸಿರುಕ್ರಾಂತಿ'** ಮತ್ತು **'ಬಿಳಿಕ್ರಾಂತಿ'** ಯಿಂದ ಅಗಾಧವಾಗಿ ಬೆಳೆಯುತ್ತಿರುವ ನಮ್ಮ ಜನಸಂಖ್ಯೆಗೆ ಅತ್ಯವಶ್ಯಕವಾದ ಆಹಾರ ಒದಗಿಸಿದೆ. ಕಡಿಮೆ ಇಂಧನ ಶಕ್ತಿಯಿಂದ ಅತಿ ಬೇಗ ರುಚಿರುಚಿಯಾದ ಭಕ್ಷ್ಯ ಭೋಜ್ಯಗಳನ್ನು ತಯಾರಿಸುವ ವಿಧಾನ ತಿಳಿದಿದೆ. ಮಾನವನ ಅವಶ್ಯಕತೆ ಹಾಗು ಆಂಕಾಕ್ಷೆಗಳಿಗನುಗುಣವಾದಂತಹ ಉಡುಪು ದೊರೆಯುತ್ತಿದೆ. ಅನುಕೂಲಕ್ಕೆ ತಕ್ಕಂತೆ ಬೇಸಿಗೆಯನ್ನು ತಂಪುಮಾಡಬಲ್ಲ ಚಳಿಕಾಲದಲ್ಲಿ ಬಿಸಿಹವೆ ಕೊಡಬಲ್ಲ ನಾನಾ ವಿಧಾನಗಳು ವಿಜ್ಞಾನದ ಅವಿಷ್ಕಾರದಲ್ಲಿ ಸೇರಿವೆ. ಮನರಂಜನೆಗಾಗಿ ರೇಡಿಯೋ, ಟಿ.ವಿ. ಹಾಗೂ ಅನೇಕ ಸಂಗೀತ ಸಾಧನಗಳು ಇವೆ. ನಿಯಂತ್ರಿಸಬಲ್ಲ ಔಷಧೋಪಚಾರಗಳು ಒದಗಿವೆ. ಪ್ರಪಂಚದ ಯಾವ ಮೂಲೆಗಾದರೂ ಕ್ಷಣಮಾತ್ರದಲ್ಲಿ ಮಾತನಾಡಬಲ್ಲ ಯಂತ್ರಗಳು, ಹಾರಾಡಿ ಹೋಗಬಲ್ಲ ವಿಮಾನಗಳೂ ಲಭಿಸಿವೆ. ಕ್ಲಿಷ್ಟಕರವಾದ ವಾತಾವರಣದಲ್ಲಿ ಮಾಡಬೇಕಾದ ಕಾರ್ಯಗಳನ್ನು ವ್ಯವಸ್ಥಿತವಾಗಿ ಹಾಗೂ ಕರಾರುವಾಕ್ಕಾಗಿ ಮಾಡಬಲ್ಲ ರೋಬಟ್ ಮಾನವನ ಸೃಷ್ಟಿಯಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ ಮಾನವನ ಆರೋಗ್ಯ, ಐಶ್ವರ್ಯ ಹಾಗೂ ಕ್ಷೇಮ ಲಾಭಗಳಿಗೆ ಅವಶ್ಯಕವಾದಂತಹ ಅನೇಕ ಹೊಸ ಹೊಸ ಆವಿಷ್ಕಾರಗಳನ್ನು ಈಗಿನ ಪ್ರಪಂಚ ಕಂಡಿದೆ. ಈ ಕೊಡುಗೆಗಳ ಬಗ್ಗೆ ಪ್ರಪಂಚದಾದ್ಯಂತ 'Fantastic', marvellous, ಹಾಗೂ incredible ಎಂದು ಹೊಗಳಲಾಗಿದೆ. ವಿಜ್ಞಾನಿಗಳನ್ನು ಅತಿಮಾನವರೆಂದು ಹೊಗಳಲಾಗುತ್ತಿದೆ. Science which only three centuries ago was on 'tap' is now



' on top.' Science has proved to the hilt that knowledge is power'' ಎಂಬ ಶ್ಲಾಘನೆಗೆ ಅರ್ಹತೆ ಪಡೆದಿದೆ.

ವಿಜ್ಞಾನದಿಂದ ಮತ್ತೊಂದು ಉಪಕಾರ ಮಾನವನಿಗೆ ದೊರೆತಿದೆ. ವಿಜ್ಞಾನದ ಬೆಳವಣಿಗೆಯಿಂದ ಭೌತಿಕವಾದ (materialism) ಹೆಚ್ಚಿ ಪ್ರತಿಯೊಂದು ವಿಚಾರವನ್ನೂ, ಸನ್ನಿವೇಶವನ್ನೂ ಚಿಕಿತ್ಸಕ ಬುದ್ಧಿಯಿಂದ ಪರಿಶೀಲಿಸುವ ಶಕ್ತಿ ವಿದ್ಯಾವಂತರಲ್ಲಿ ಮೂಡಿತು. ಈ ಲೌಕಿಕವಾದದಿಂದ ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಹಾಗೂ ನಡೆಯುತ್ತಿರುವ ಅರ್ಥಹೀನ ಆಚಾರ ವಿಚಾರಗಳನ್ನೂ, ಮೂಢನಂಬಿಕೆಗಳನ್ನೂ ಒರೆಗಲ್ಲಿಗೆ ಹಚ್ಚಿ ಜೇಡರ ಬಲೆಯಂತೆ ಹರಡಿದ್ದ ಢಂಭಾಚಾರ, ಮತಾಂಧತೆಯನ್ನು ದೂರಮಾಡಲು ಸಹಾಯವಾಗಿದೆ. ಅಮಾನುಷ ಪದ್ಧತಿಗಳಾದ ಬೆತ್ತಲೆಸೇವೆ, ದೇವದಾಸಿ ಪದ್ಧತಿ. ಅಸ್ಪೃಶ್ಯತೆ ಮುಂತಾದ ಅಮಾನುಷ ಕೃತ್ಯಗಳನ್ನು ಖಂಡಿಸುವಂತಹ ಮನೋಭಾವ ಬೆಳವಣಿಗೆಗೆ ವಿಜ್ಞಾನ ತುಂಬಾ ಸಹಾಯಮಾಡಿದೆ. ಇದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಎಲ್ಲ ಧರ್ಮಗಳ ನಿಜವಾದ ತತ್ವಗಳೇನು ಎಂಬುದನ್ನು ವಿಮರ್ಶಿಸಿ ತಿಳಿಯಲು ಹಾಗೂ ಮಾನವ ವರ್ಗವೆಲ್ಲಾ ಒಂದೇ ಎಂಬ ವಿಶ್ವಭಾತೃತ್ವ ಮೂಡಿಸುವಲ್ಲಿ ವಿಜ್ಞಾನದ ಕೊಡುಗೆ ಸಾಮಾನ್ಯವೇನಲ್ಲ.

ಹಿರಿಯ ಮಾನವತಾವಾದಿಗಳು ವಿಜ್ಞಾನದ ಕೊಡುಗೆಯನ್ನು ಹೀಗೆ ಹೊಗಳಿದ್ದಾರೆ. " This birth of a Cosmopolitan faith tended to eliminate the disseeting components of the various religions such as customs, beliefs etc, which must have had relevancee to the different times and societies for whom they were originally intended but which were out moded and even harmful to modern society it also brougat to light the greet contribution that every religion had made to human civilization as the supreme source of its ethical, artistical, cultural and spiritual glory "

This tide of reform of religion gathered strength, it brought a new awakening in the west as well as in the East. ............... They largely contrib-

uted to generating a new trend of building one world order in the most rational philosophy which canensure man Continuity of life and Civilization.

ಒಂದೇ ವಾಕ್ಯದಲ್ಲಿ ಹೇಳುವುದಾದರೆ

" This trend wasmost helpful in rationalising religion." ಧರ್ಮದ ಹೆಸರಿನಲ್ಲಿ ಮಾನವ ಅವನತಿ ಹೊಂದುತ್ತಿದ್ದಾಗ ಅವನನ್ನು ಕೈ ಎತ್ತಿ ಹಿಡಿದು ಎಚ್ಚರಿಸಿದ ಆಪದ್ಬಂಧು ವಿಜ್ಞಾನವಲ್ಲವೇ?

## " ಶ್ರೀ ಬಸವೇಶ್ವರ ಮತ್ತು ಡಾ. ಅಂಬೇಡ್ಕರ "

(ತುಲನಾತ್ಮಕ ವಿವೇಚನೆ,

ಈ ವಿಷಯವನ್ನು ಕುರಿತು ಬರೆಯಲ್ಪಟ್ಟ ಹಸ್ತಪ್ರತಿಗಳನ್ನು ಈ ಬಹುಮಾನ ಯೋಜನೆಯ ಅಂಗವಾಗಿ ಆವ್ಹಾನಿಸಲಾಗಿದೆ. ಸ್ಪರ್ಧೆಯಲ್ಲಿ ಭಾಗವಹಿಸಲಿಚ್ಛಿಸುವ ಲೇಖಕರು ಕೆಳಗೆ ಕಾಣಿಸಿದ ಕರಾರುಗಳಿಗೆ ಅನುಗುಣವಾಗಿ ಹಸ್ತಪ್ರತಿಗಳನ್ನು ಸಿದ್ಧಪಡಿಸಿ 31 ನೇ ಡಿಶಂಬರ್ 1991 ರೊಳಗಾಗಿ ಕಳಿಸಿಕೊಡಬೇಕು.

ಹಸ್ತಪ್ರತಿ (ಬೆರಳಚ್ಚುಪ್ರತಿ) ಎಲ್ಲಿಯೂ ಪ್ರಕಟವಾಗಿರಬಾರದು. ಹಾಳೆಯ ಒಂದೇಮಗ್ಗಲು ಬರೆದಿರಬೇಕು ಹಸ್ತಪ್ರತಿ ಅಜಮಾಸು 100 ಪುಟಗಳಿಗೆ ಮೀರ ಕೂಡದು. ಹಸ್ತಪ್ರತಿಗಳನ್ನು ಪರೀಕ್ಷಿಸಲು ನಿರ್ಣಾಯಕ ಮಂಡಳಿಯೊಂದಿದು ಅದರ ಅದರ ತೀರ್ಪು ಕೊನೆಯದು. ನಿರ್ಣಾಯಕ ಮಂಡಳಿಯು ಅತ್ಯುತ್ತಮವೆಂದು ಪರಿಗಣಿಸಿದ ಹಸ್ತಪ್ರತಿಗೆ 2000 (ಎರಡುಸಾವಿರ) ರೂಪಾಯಿ ಬಹುಮಾನ ನೀಡಲಾಗುವುದು. ಬಹುಮಾನಕ್ಕೆ ಅರ್ಹವಾದ ಅತ್ಯುತ್ತಮ ಹಸ್ತಪ್ರತಿಯನ್ನು ಮುದ್ರಿಸಿ ಪ್ರಕಟಿಸುವ (ಪ್ರಥಮ ಮುದ್ರಣ) ಹಕ್ಕು ಶ್ರೀ ಬಸವಲಿಂಗ ಪಟ್ಟದ್ದೇವರು, ಹಿರೇಮಠ ಸಂಸ್ಥಾನ, ಭಾಲ್ಕಿ, ಜಿಲ್ಲಾ; ಬೀದರ-ಇವರಿಗೆ ಸೇರುವದು. ಪ್ರಕಟವಾದ ಗ್ರಂಥದ 100 ಪ್ರತಿಗಳನ್ನು ಲೇಖಕನಿಗೆ ಕೊಡಲಾಗುವದು, ಬಹುಮಾನ ಸ್ಪರ್ಧೆಗಾಗಿ ಸಲ್ಲಿಸುವ ಹಸ್ತಪ್ರತಿಗಳನ್ನು ಮರಳಿ ಕಳಿಸುವದಿಲ್ಲ. ಆದ್ದರಿಂದ ಲೇಖಕರು ನಕಲಪ್ರತಿಯನ್ನು ತಮ್ಮಲ್ಲಿ ಇಟ್ಟುಕೊಳ್ಳಬೇಕು.

**ಹಸ್ತಪ್ರತಿಯನ್ನು ಕಳಿಸುವ ವಿಳಾಸ;** ಶ್ರೀ ಬಸವಲಿಂಗಪಟ್ಟದ್ದೇವರು

ಅಧ್ಯಕ್ಷರು

ಶ್ರೀ ಪೂ. ಲಿಂ. ಚ. ಚೆನ್ನಬಸವ ಪಟ್ಟದ್ದೇವರು

ದತ್ತಿ ಸಾಹಿತ್ಯ ಬಹುಮಾನ ಯೋಜನೆ ಹಿರೇಮಠ

ಸಂಸ್ಥಾನ ಪೋ ಭಾಲ್ಕಿ ಜಿ. ಬೀದರ



## ಬಸವ ತತ್ತ್ವ ರತ್ನಾಕರ – 4

**(ವಚನ ಕಾವ್ಯಸುಧಾ ಸಿಂಧು)**

ಶ್ರೀ ಮೋಟಗಿ ಮಲ್ಲಿಕಾರ್ಜುನ " ಕನ್ನಡ ಕವಿಕಾಳಿದಾಸ" ಅಥಣಿ (ಬೆಳಗಾವಿ ಜಿಲ್ಲೆ)

---

**ಲಿಂಗ ಸಾಹಿತ್ಯ**

ಭಸ್ಮ ಜ್ಯೋತಿ

ಕಂದ|| ಶಿವಶರಣನ ಪಣೆಯೊಳೆಸೆವ |
ಧವಳಮಯ ಶುದ್ಧ ಭಸ್ಮದುರೆ ಮೂದಳಗಳ್||
ಕವಿದ ತ್ರಿಮಲವ ಕಳೆಯಲ್ |
ಶಿವಭಕ್ತಿ ಜ್ಞಾನ ವಿರತಿಯೆನೆ ಕಂಗೊಳಿಕುಮ್||

" ಕನ್ನಡ ಕವಿಕಾಳಿದಾಸ " ಕೃತ " ಶಿವಾನುಭವದರ್ಪಣ " ಪ-12

" ಶುಭದಾಯಕಮಾದ ಶಿವ ಚಿಹ್ನಾಂಕಿತಮಾದ
ಸದ್ ಭಕ್ತನಾ ಪಣೆಯೊಳೆಸೆಯುತಿರ್ಪಾ

ಧವಳವರ್ಣದಿಂ ಶುದ್ಧಮಾಗಿಪ್ಪ ವಿಭೂತಿಯಾ ಮೂದಳಗಳ್
ಮಲತ್ರಯಂಗಳನು ಕಳೆದು ಬೆಳಗುತಿಪ್ಪುದರ ಕುರುಹು ನೋಡಾ!

' ಆಣವಮಲ ' ವೆನಿಸಿರ್ದ ' ಅಪರಿಪೂರ್ಣತ್ವ ' ವನು
ಕಳೆದು ಹೊಳೆವು ದೊಂದೆಸಳು !
' ಕಾರ್ಮಿಕಮಲ ' ವೆನಿಸಿರ್ಪ ' ಅಲ್ಪಕರ್ತೃತ್ವ ' ವನು
ಕಳೆದು ಬೆಳಗುವ ದೊಂದೆಸಳು !
' ಮಾಯಾಮಲ ' ವೆನಿಪ ' ಅಲ್ಪಜ್ಞತ್ವ ' ವನು
ಕಳೆದು ಪ್ರಕಾಶಿವು ದೊಂದೆಸಳು !

ಇಂತೀ ತ್ರಿವಿಧಮಲ ರಹಿತನಾಗಿ ಶಿವಭಕ್ತಿ - ಜ್ಞಾನ - ವಿರತಿ
ಸಂಪನ್ನನಾಗಿ ಕಂಗೊಳಿಪ ಶರಣ
ಮೂದಳಾಂಕಿತ ಭಸ್ಮಫಣಿ ಜ್ಯೋತಿಯಿಂದ ಪ್ರಕಾಶಿಸುತಿರ್ದನು
ಕಾಣಾ, ಶ್ರೀ ಶೈಲ ಮಲ್ಲಿಕಾರ್ಜುನ !

ತ್ರಿವಿಧ
ಡಾ || ಶ್ರೀ
ಜನ್ಮದಿನೋ



ಕುರುಡರ ಬಾಳಿಗ
ವಿಶ್ವದಾಖಿಲಾತಿ



ಸಿದ್ದಗಂ
ಮಠದ ಹಳೆ

## ರುದ್ರಾಕ್ಷ ಮಹಿಮೆ [32]

ಹ. ವೃ। ಪರಮ ಶಿವದೀಕ್ಷಾಸಂಪನ್ನಂ ಶಿವಾಕ್ಷಗಳಂಗದೊಳ್।
ಧರಿಸಿಹ ಶಿವಾಚಾರ ಪ್ರಾಬಲ್ಯದಿಂದಿಳೆಯೊಳ್ ಸದಾ॥
ಸುರಿಯುವ ಶಿವಾದ್ವೈತ ಜ್ಞಾನ ಪ್ರಕಾಶವೆ ನಿಂದಿರಲ್ ।
ಕಿರಣಮಯ ರುದ್ರಾಕ್ಷಾಂಗಂ ಶಂಕರರಂಗನು ಕೂಲನುಮ್॥

" ಧರ್ಮಜ್ಞ " ಕವಿಕೃತ " ಶಿವಾನುಭವದರ್ಪಣ " ಪ, 13

" ಶಿವದೀಕ್ಷಾಸಂಪನ್ನನಾಗಿಪ್ಪ ಮಹಾಶರಣನು
ಶಿವಾಕ್ಷಗಳಂಗದೊಳ್ ಧರಿಸಿದವನಾಗಿರ್ದು
ಶಿವಾಚಾರ ಪ್ರಾಬಲ್ಯದಿಂದಿಳೆಯೊಳ್ ನಿರುತ
ಶಿವಾದ್ವೈತ ಜ್ಞಾನಪ್ರಕಾಶಮಂ ಸುರಿಯುತಿರ್ದನು ನೋಡಾ!

ರುದ್ರಾಕ್ಷಮಾಲಾಲಂಕೃತನಾದ ಶರಣನು ಶಿವನ
ಲೋಕ ರಕ್ಷಣಾ ಕಾರ್ಯದಲ್ಲಿ ಸಹ ಚರನಾಗಿರ್ಪನು ನೋಡಾ
ಇಂತಪ್ಪ ರುದ್ರಾಕ್ಷಂಗಳು – ರುದ್ರದೇವನಾಅ ಕ್ಷೀ ( ಕಣ್ಣು ) ಗಳೆ
ಶರಣನಂಗದ ಮೇಲೆ ಕಂಗೊಳಿಸುತಿರ್ದು ವೀರ - ರುದ್ರ
ಸಂಕೇತಗಳಾಗಿ ಜಗದ್ರಕ್ಷಣೆಗೆ ಕಾರಣ ವಾಗಿಪ್ಪವು
ಕಾಣಾ, ಶ್ರೀ ಶೈಲ ಮಲ್ಲಿಕಾರ್ಜುನ ! "

## ಶಿವ ಮಂತ್ರಮಹಿಮೆ [33]

### ಪಂಚಾಕ್ಷರಿ ಮಂತ್ರ ಮಹಿಮೆ :

ಕಂದ || ಸಲೆ ಸಪ್ತಕೋಟಿ ಮಂತ್ರಂ।
ಗಳಿಗಧಿಕಮೆನೆ ಮಿಗೆ ಕಂಗೊಳಿಪ ಶಿವಮಂತ್ರಂ ||
ಒಲವಿನಲಿ ಶರಣನನಿಶಂ।
ನಲಿನಲಿದು ನುತಿಸುತಿರಲಿಳೆಯೊಳ್ ಬೆಳಗುವುದಯ್ ||

"ಕನ್ನಡಕವಿಕಾಳಿದಾಸ" ಕೃತ "ಶಿವಾನುಭವ ದರ್ಪಣ" ಪ|| 4



"ಏಳುಕೋಟಿ ಸುಮಂತ್ರಂಗಳ್ಗೆ ಅನಾದಿಯೆನಿಸಿರ್ಪ
'ನಮಃ ಶಿವಾಯ' ಪಂಚಾಕ್ಷರ ಶಿವಮಂತ್ರಮಿದು
ಫಾಲನೇತ್ರನ ಪಂಚಮುಖ ಕಮಲಮೆನುವವೋಲ್
ಐದುಅಕ್ಷರಗಳಿಂದ ಕಂಗೊಳಿಸುತ್ತಿದ್ದಿತು ನೋಡಾ.
ಶಿವಯೋಗಿ ಹೃದಯ ಕಾಸಾರ ಹಂಸಮಾಗಿ
ಪರಶಿವ ಸಂಪದಮೆನಲು ದಿವ್ಯಾಭರಣವಾಗಿ
ಕಾಲಮೃತ್ಯುವಿಗೆ ಮಹಾಕಾಲನಾಗಿ ಮಹಾಲಿಂಗಪೂರಿತಮಾಗಿ
ಪಂಚಾಕ್ಷರ ಶಿವಮಂತ್ರಮಿದು ಅಮೃತಪ್ರಾಯಮಾಗಿಪ್ಪುದು
ಕಾಣಾ, ಶ್ರೀಶೈಲಮಲ್ಲಿಕಾರ್ಜುನ. "

## ಷಡಕ್ಷರ ಮಂತ್ರ ಪ್ರಭಾವ : –34

"ನಮಃಶಿವಾಯ, ಪಂಚಾಕ್ಷರ ಮಂತ್ರಮಹಿಮೆಯೋಲ್,
ಓಂ ನಮಃಶಿವಾಯ, ಷಡಕ್ಷರ ಮಂತ್ರಮಹಿಮೆಯಿರ್ಪುದು ನೋಡಾ !
ವೀರಶೈವಾಚಾರ ಸಂಪದಮೆನೆ ಷಟ್‌ಸ್ಥಲ ದ್ಯೋತಕ ಮಾಗಿಪ್ಪುದು ನೋಡಾ !
ಸಪ್ತಕೋಟಿ ಮಂತ್ರಂಗಳ್ಗೆ ಮಿಗಿಲೆನಿಸಿರ್ದ ಉಭಯ ಮಂತ್ರಗಳಿವು
ಶಿವಪದ ಫಲಪ್ರದಮಾಗಿ ಮೂಲೋಕ ಪೂಜ್ಯಮೆನಲು
ಶಿವಮಂತ್ರಮಾಗಿ ಶರಣಹೃದಯ ಪ್ರಾಣಮಾಗಿರ್ಪುವು
ಕೇಳಾ, ಶ್ರೀಶೈಲಮಲ್ಲಿಕಾರ್ಜುನ. "

## ಪಾದೋದಕ ಪ್ರಭಾವ-35

ತಿ. ವೃ॥ ಶಿವೋಹಂ ತತ್ತ್ವಜ್ಞಾನಿಯೆನಿಪ ಮಹಾಜಂಗಮನೊಳಿ - ।
ರ್ಪುವಾ ಜ್ಞಾನಾಗ್ನಿಜ್ಯೋತಿ ಬೆರೆದು ಬರಲ್ ಪಾದಜಲದೊಳ್ ||
ಶಿವಾಂಶಂ ಸರ್ವಾಂಗಕ್ಕೆ ಬಳೆಯುವ ಭಕ್ತಂಗೆ ನಿರುತಮ್
ಪವಿತ್ರಂ ಧೀವೃದ್ಧಿಂಗತಮೆನಿಸುತಂ ನೀಳ್ಗೆ ಸುಖಮುಮ್ ||

– "ಧರ್ಮಜ್ಞಕವಿ" ಕೃತ "ಶಿವಾನುಭವದರ್ಪಣ ಪ. 15

"ಶಿವನೇ ತಾನಾಗಿಪ್ಪ ಮಹಾಜಂಗಮನೊಳಿರ್ದ ಜ್ಞಾನಾಗ್ನಿ ಜ್ಯೋತಿಯು
ಪಾದಾಂಗುಷ್ಟಮುಖವಾಗಿ ಜಲದಲ್ಲಿ ಬೆರೆದು ಬರುವುದರಿಂದ,

ಈ ದ್ರವರೂಪ ಮಾದ ಶಿವಾಂಶವನು ಸರ್ವಾಂಗಕ್ಕೆ ಬಳೆಯುವ ಭಕ್ತನಿಗೆ
ಜ್ಞಾನಾನುಭವಮುಂತಾಗಿ ಸ್ವಸ್ವರೂಪ ಸಾಕ್ಷಾತ್ಕಾರಕ್ಕೆ
ಅನುಕೂಲವನ್ನುಂಟುಮಾಡಿಕೊಡುವುದಲ್ಲದೆ
ನಿಜ ಸುಖಶಾಂತಿಪ್ರದಾಯಕ ಮಾಗಿದೆ.
ಈ ಪಾದೋದಕ ಪ್ರಭಾವವಿಂತಿರ್ಪುದು
ಕಾಣಾ, ಶ್ರೀಶೈಲಮಲ್ಲಿಕಾರ್ಜುನ. ”

ಟೀ : ವಿಶ್ವದ ಶ್ರೇಷ್ಠತತ್ತ್ವ ಪ್ರತಿಪಾದನಾ ಧರ್ಮಗ್ರಂಥಗಳಲ್ಲಿ ವೀರಶೈವ ಶಿವಶರಣರ ಅನುಭಾ[…] ಪ್ರಧಾನವಾದ ವಚನವಾಙ್ಮಯದಲ್ಲಿ ವಿವರಿಸಲಾದ ಪರತತ್ತ್ವ ವಿವೇಚನೆಯು ಅತ್ಯುನ್ನತ ಮಟ್ಟ[…]ದ್ದಾಗಿ ಅತ್ಯಂತ ಶ್ರೇಷ್ಠವೆನಿಸಿದೆ. ಈ ಬಗೆಯ ಸುಲಭ ಆತ್ಮಸಾಕ್ಷಾತ್ಕಾರದ ಷಟ್‌ಸ್ಥಲಾತ್ಮ[…] ಪರಶಿವ ಪದದ ಸುಜ್ಞಾನ ಸುಭೋಧೆಯು ಜಗತ್ತಿನ ಯಾವ ಧರ್ಮಗ್ರಂಥಗಳಲ್ಲಿಯೂ ಹೇ[…]ಲ್ಪಟ್ಟಿಲ್ಲ. ಈ ದೃಷ್ಟಿಯಿಂದ ( ವೀರಶೈವ ) ಲಿಂಗಾಯತ ಧರ್ಮವು ವಿಶ್ವಧರ್ಮವೆನಿಸಿದೆ.

## ಪ್ರಸಾದಮಹಿಮೆ [36]

ಚಂ.ಮಾ.ವೃ ॥ ವರಗುರು ಮುಂದೆ ತಂದಿರಿಪ ಭಕ್ತನ ಪೂರ್ಣ ವಿಶುದ್ಧ ವಸ್ತುವಮ್ ।
ಕರುಣದಿ ಕಂಡು ಸೇವಿಸುತೆ ಶೇಷವ ಭಕ್ತನಿಗರ್ಪಿಸಲ್ ಕೃಪಾ ॥
ಭರದಿ ಮಹಾಪ್ರಸಾದ ಮಯುವಾಗಿರೆ ಭಕ್ತಗೆ ಶಾಂತಿಹರ್ಷಮುಮ್ ।
ಕರೆಯುವುದಾಗಿ ಸಂತತಸುಖಂ ಧರಣೀತಲದೊಳ್ ಸುಧಾರಸಮ್ ॥

"ಕನ್ನಡಕವಿಕಾಳಿದಾಸ" ಕೃತ "ಶಿವಾನುಭವದರ್ಪಣ" ಪ. 16

"ಭಕ್ತನು ಮುಂದೆ ತಂದಿರಿಸಲಾದ ವಿಶುದ್ಧ ವಸ್ತುವನು
ಪರಮ ಶ್ರೀಗುರುವು ಕರುಣದಿಂದ ನೋಡಿ ಸೇವಿಸಿ,
ಶೇಷವನು ಅಭಕ್ತಂಗೆ ಆನಂದದಿಂದ ಕೊಡುವುನಾಗಿ
ಅದುವೆ ಮಹಾಪ್ರಸಾದವಾಗಿ ಶಾಂತಿಹರ್ಷವನು
ನೀಡುವುದಾಗಿ ಪೃಥ್ವಿಯ ಮೇಲೆ ಸರ್ವರಿಗೂ ಅಮೃತಪ್ರಾಯವಾಗಿ[…]
ಇಂತು ಪ್ರಸಾದ ಮಹಿಮೆ ಕಾಣಾ, ಶ್ರೀ ಶೈಲಮಲ್ಲಿಕಾರ್ಜುನ.

## ಲಿಂಗಭಕ್ತಿ

ಕಂದ ॥ ಭಕ್ತಗೆ ಜನಿಸಿಹ ಭೂಮಿಯೆ ।
ಮುಕ್ತಮೆನಲ್ ಲಿಂಗಭಕ್ತಿಯಿಂ ಶಿವಭಕ್ತಮ್ ॥



ಮುಕ್ತಿಯ ಸಾಧಿಸೆ ನುಡಿಯುವ ।
ಉಕ್ತಿಯೆ ಮಹಮಂತ್ರವಾಗೆ ಜಗಪಾವನವಯ್ ॥

"ಧರ್ಮಜ್ಞಕವಿ" ಕೃತ "ಶಿವಾನುಭವ ದರ್ಪಣ" ಪದ್ಯ - 17

ಶಿವಭಕ್ತಿ ಶಿವಜ್ಞಾನ ಶಿವಮಹಿಮೆಯಂ ಜಗಕೆ ತೋರಲೆಂದು
ಶಿವಶರಣ ಕರುಣೆದಳೆದು ಭುವಿಗೆ ಬರ್ಪನು ನೋಡಾ !
'ಶರಣಸತಿ ಲಿಂಗಪತಿ' ಭಾವದುಂಬಿ ಶಿವಶರಣ ಇಷ್ಟಲಿಂಗ ಭಕ್ತಿ-
ರತಿಯಲ್ಲಿ ಭಕ್ತಿಯೋಗಿಯಾರ್ದನು ನೋಡಾ.
ಸಕಳಾರ್ಥ ಶಿವಪದ ಸಿದ್ಧಿಯಿಂ ಮಹಾನುಭಾವಿ ಶಿವಶರಣ
ಮನುಕುಲಕೆ ಮುಕ್ತಿಪಥ ತೋರ್ಪನು ನೋಡಾ
ಇಂತಪ್ಪ ಹರಶರಣರ ಉಕ್ತಿಯೆ ಮಹಾಮಂತ್ರವಾಗಿ
ಜಗಪಾವನವಪ್ಪುದು ಕಾಣಾ, ಶ್ರೀಶೈಲ್ಲಮಲ್ಲಿಕಾರ್ಜುನ !

## ಇಷ್ಟಲಿಂಗವೇ ಶ್ರೇಷ್ಠ

[38]

ಚಂ.ಮಾ.ವೃ॥ ಗುರುಕೃಪೆಯಿಂದೆ ತಾಂಪಡೆದ ಮುಕ್ತಿಸುಖಾನ್ವಯದಿಷ್ಟಲಿಂಗಮುಮ್
ಶರಣನೆ ಭಕ್ತಿಯಿಂ ಭಜಿಸುತಂ ನೆರೆನಂಬುಗೆಯಾಂತು ನಿತ್ಯದೊಳ್ ॥
ಹೊರಗಿನ ಬೇರೆಲೋಕದ ಜಡಾತ್ಮಕಲಿಂಗವ ನಂಬನೆಂದಿಗುಮ್ ।
ನೆರೆಯೊಳುರೆ ಪ್ರವಾಹನುಳಿದಾ ಬರಿಬಾವಿಯತೋಡಲಾಗದಯ್ ॥

"ಕನ್ನಡಕವಿಕಾಳಿದಾಸ" ಕೃತ "ಶಿವಾನುಭವದರ್ಪಣ" ಪ - 11

"ಮನೆಯಮುಂದೆಹಾಲುಹೊಳೆ ಹರಿಯುತ್ತಿರಲು, ಬೇಳೆ
ಬಾವಿಯ ತೋಡಿ ಬರಿದೆಬಳಲಲೇಕೆ ?
ಬೇಡಿದವರಗಳನೀವಕರಕಮಲ ದಿಷ್ಟಲಿಂಗವಿರಲು, ಧರೆಯ
ಸ್ಥಾವರಲಿಂಗಗಳಿಗೆರಗಿ ವ್ರತಗೇಡಿ ಯಾಗಲೇಕೆ ?
ಪರಮ ಪತಿವ್ರತೆಗೆ ಗಂಡನ್ನೊಬ್ಬನೇ ನೋಡಾ !
ಶರಣ ಸತಿಗೆ ಲಿಂಗಪತಿಯೋರ್ವನೇ ನೋಡಾ !
ಇಂತಪ್ಪಶರಣಲಿಂಗಾಂಗ ಸಾಮರಸ್ಯ ಸುಖಾಬ್ಧಿಯೊಳ್ ಮುಳುಗೇಳ್ದ
ಸಂತತಂ ಪರಶಿವಲೀಲಾ ವಿಲಾಸಿಯಾಗಿರ್ದನು
ಕಾಣಾ, ಶ್ರೀ ಶೈಲ ಮಲ್ಲಿಕಾರ್ಜುನ "

## ಇಷ್ಟಲಿಂಗದ ನಿಜಸ್ವರೂಪ

[ 39 ]

ಪೃ. ವೃ॥ ಸಹಸ್ರ ದಳ ಪದ್ಮಕರ್ಣಿಕೆಯ ಮಧ್ಯದೊಳ್ ರಂಜಿಪಾ ।
ಮಹಾ ಸುಖ ಸುಶಾಂತಿ ಸಂಪದ ಸಮೇತ ಚಿದ್ಬಿಂದುವೇ ॥
ಸಹಾಯಮಯ ದಿಷ್ಟಲಿಂಗಮೆನಿಸಲ್ ಮಹಾಸ್ವಾಮಿಯಿಂ ।
ಮಹೋನ್ನತಿಗೆ ಸಾಧನಂ ಸಮರಸೈಕ್ಯ ತತ್ತ್ವಾಕರಂ ॥

**"ಧರ್ಮಜ್ಞ ಕವಿ" ಕೃತ "ಶಿವಾನುಭಾವದರ್ಪಣ"  ಪ. 10**

"ಪರಮ ಶಿಷ್ಯನಾ ಶಿರೋಭಾಗದಲ್ಲಿ ಶೋಭಿಸುತಿರ್ದ
ಸಹಸ್ರದಳ ಪದ್ಮಕರ್ಣಿಕೆಯ ಮಧ್ಯದಲ್ಲಿ ಬೆಳಗುತಿರ್ಪಾ
ಚಿದ್ಬಿಂದು ಕಲಾಜ್ಯೋತಿ ಸ್ವರೂಪದಿಷ್ಟ ಲಿಂಗಮಂ
ಮಹಾಗುರುಸ್ವಾಮಿಯು ಆಶಿಷ್ಯಂಗೆ ಕರುಣದಿಂ ನೀಡಿ
ಮಹಾಸುಖಶಾಂತಿದಾಯಕವಾದ ಲಿಂಗಾಂಗ ಸಾಮರಸ್ಯ-
ಜ್ಞಾನವನು ಅನುಗ್ರಹಿಸುವನು ನೋಡಾ.
ಇಂತಪ್ಪ ನಿಜಸ್ವರೂಪ ಮಾದಿಷ್ಟಲಿಂಗವಂ ಶಿಷ್ಯನಿಗೆ ನೀಡಿ
ಕೈವಲ್ಯ ಸುಖದೊಳಿರಿಸಿ ಉದ್ಧರಿಪ ಸದ್ಗುರು ಕರುಣಾವ:ೂರ್ತಿಯಲ್ತೇ
ಹೇಳಾ ? ಶ್ರೀ ಶೈಲ ಮಲ್ಲಿಕಾರ್ಜುನ ! "

## ಶ್ರೀ ಗುರುವಿನ ಲಕ್ಷಣ

[ 40 ]

ಮ.ಸ.ವೃ॥ ಸಲೆ ನಿನ್ನಂಗಕ್ಕೆ ಕೂಡಿರ್ಪ ಮರವೆಯ ತಮಸ್ಸಂ ಸ್ವಧೀಯೋಗತೇಜಃ।
ಕಲಿತಂ ನಿತ್ಯಂ ಪ್ರಮೋದಾಮಿತ ವರಗುರು ಕಾರುಣ್ಯದಿಂ ನಾಶಗೆಯ್ದಾ ॥
ಮಲಿನಂ ದೂಡಿ ಪ್ರಭಾವಂ ಸುರಿದು ಕೊಡಲುರೆ ಜ್ಞಾನ ತತ್ತ್ವ ಪ್ರಬೋಧಾ ॥
ಮಿಳಿತಂ ಶ್ರೇಷ್ಠಂಶ್ರುತಂ ಶ್ರೀ ಗುರುವು ತಿಳಿಯಿವಂ ಶಾಶ್ವತಂ ದೇವರೂಪಂ ।

**" ಕನ್ನಡ ಕವಿ ಕಾಳಿದಾಸ " ಕೃತ ಶಿವಾನುಭಾವ ದರ್ಪಣ  ಪ. 7**



"ಪರಮ ದೈವ ಸ್ವರೂಪನಾಗಿಪ್ಪ ಮಹಾಜ್ಞಾನಿಯಾಗಿಪ್ಪ
ಶಿವಯೋಗಿಯೆ ಸದ್ಗುರುವೆನಿಪನು ನೋಡಾ
ಇಂತಪ್ಪ ಶ್ರೀ ಗುರುವು ಶಿವಜ್ಞಾನಯೋಗ ತೇಜಸ್ತೇಜೋರೂಪನಾಗಿ
ಶಿಷ್ಯನ ಅಜ್ಞಾನ ತಮವನು ಕಳೆದು ಸುಜ್ಞಾನ ಬೆಳಕನು ಕರೆವನೋಡಾ
ಪರುಷ ಮುಟ್ಟಲೊಡನೆ ಕಬ್ಬುನವು ಸುವರ್ಣಮಪ್ಪಂತೆ
ರವಿ ಆಗಮಿಸಲೊಡನೆ ಕತ್ತಲೆಯಳಿದು ಬೆಳಕು ಬರ್ಪಂತೆ
ಶ್ರೀ ಗುರು ಅನುಗ್ರಹಿಸಲೊಡನೆ ಶಿಷ್ಯ ಸುಜ್ಞಾನಿಯಪ್ಪನು ನೋಡಾ
ಇಂತಪ್ಪ ಶಿವಜ್ಞಾನಿ ಪರಶಿವರೂಪಿ ಶ್ರಿ ಗುರುವು ಶ್ರೇಷ್ಠ ಕೈವಲ್ಯಪದ-
ವೀವನಿದು ಸತ್ಯಕಾಣಾ, ಶ್ರೀ ಶೈಲ ಮಲ್ಲಿಕಾರ್ಜುನ ! "

---

ವಿಶೇಷ ಟೀಪು :–

### ಸುಬೋಧಾಮೃತ

" ಮೊದಲು ಆತ್ಮ ಪ್ರೇಮ ಮೂಡಬೇಕು. ಅದರಲ್ಲಿ ಸಮಾಜ ಪ್ರೇಮ ಇರಬೇಕು. ಆ ಮೂಲಕ ವಿಶ್ವಪ್ರೇಮ. ಇದಕ್ಕಾಗಿ ತನು ಮನ ಭಾವಗಳ ಶುದ್ಧಿಯನ್ನು ಸಂಪಾದಿಸಬೇಕು, "

"ಪರಲೋಕ ಎಂದರೆ ಆತ್ಮಲೋಕ. ಶ್ರೇಷ್ಠವಾದ ಲೋಕವೆಂದರೆ ಇದುವೇಆಗಿದೆ. ಎಲ್ಲಿ ಆತ್ಮ ವಿವೇಕ ಆತ್ಮಶಾಂತಿ ಆತ್ಮಸುಖ ಇರುತ್ತದೆಯೋ ಅದುವೇ ಪರಲೋಕ. "
"ನಮ್ಮ ಮನಸ್ಸೆಂಬ ಜ್ಯೋತಿಗೆ ಕಟ್ಟಿದ ಮಂಕನ್ನು ಸರಿಪಡಿಸುವ ಕಡ್ಡಿ, ಮಹಾತ್ಮರ ಚರಿತ್ರೆಯ ಶ್ರವಣ ಇದರಿಂದ ನಮ್ಮ ಆತ್ಮ ಜ್ಯೋತಿ ಪ್ರಜ್ವಲಿಸುತ್ತದೆ. "

**ಚಿತ್ರದುರ್ಗದ ಪೂಜ್ಯ ಶ್ರೀ ಜಗದ್ಗುರು ಮಲ್ಲಿಕಾರ್ಜುನ ಮಹಾಸ್ವಾಮಿಗಳು.**

" ಕುಳಿತು ಊಟ ಮಾಡಬಾರದು, ದುಡಿದು ಉಣ್ಣಬೇಕು. ದುಡಿಮೆ, ದುಡಿಮೆ ದುಡಿಮೆಯೊಂದೇ ರಾಷ್ಟ್ರನಿರ್ಮಾಣದ ಮಹಾ ಮಂತ್ರವಾಗಬೇಕು. ಹಾಗಾದಾಗಲೇ ಭಾರತದ ಭವಿಷ್ಯ ಅರಳೀತು. "

"ಅಲ್ಪಶ್ರಮ, ಅಧಿಕಲಾಭದ ಮನೋಧರ್ಮವನ್ನು ಬೆಳೆಸಿಕೊಳ್ಳುತ್ತಿರುವ ಯುವ ಜನಾಂಗದ ಪ್ರವೃತ್ತಿ ರಾಷ್ಟ್ರಪ್ರಗತಿಗೆ ಆಶಾದಾಯಕವಾದುದಲ್ಲ, ನಿಷ್ಕ್ರಿಯತೆ, ಆಲಸ್ಯಗಳು ಪ್ರಗತಿಯ ಮಹಾಕಂಟಕಗಳು. '

"ನಾವು ಮಾತಾಡಬಾರದು, ನಮ್ಮ ಕೆಲಸಗಳು ಮಾತನಾಡಬೇಕು. ಅದು ವ್ಯಕ್ತಿತ್ವಕ್ಕೆ ಶೋಭೆ ಆದರೆ ಇಂದು ನಾವು ಬರೀ ಮಾತಾಡುತ್ತಿದ್ದೇವೆ. ಕೆಲಸಗಳು ಮೂಕಸ್ಥಿತಿಯಲ್ಲಿವೆ ಅಥವಾ ಕೇವಲ ಸೊನ್ನೆಗಳಾಗಿವೆ. "

**ಸಿದ್ಧಗಂಗಾಧಿಪತಿ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು.**

# ವಚನಗಳಲ್ಲಿ ಪ್ರತಿಪಾದಿತ ಷಟ್‌ಸ್ಥಲ ಒಂದು ವಿವೇಚನೆ.

ಪ್ರೊ. ಎಸ್. ಎಸ್, ಭೂಸರೆಡ್ಡಿ, ಲಕ್ಷ್ಮೀನಗರ, ಧಾರವಾಡ - 4

ಕ್ರಿಯೆಯೇ ತನು, ಜ್ಞಾನವೇ ಪ್ರಾಣ,
ತನು ಲಿಂಗವಾಗಿ, ಪ್ರಾಣ ಜಂಗಮವಾಗಿ,
ತನುವ ಸಯಮಾಡಿ, ಪ್ರಾಣವ ಲಿಂಗಜಂಗಮಕರ್ಪಿಸಿ,
ನಿರಂತರ ಸಾವಧಾನಿಯಾಗಿರಬಲ್ಲ ಪ್ರಸಾದಿಗಳ
ಎನಗೊಮ್ಮೆ ತೋರಿ ಸಲಹಾ ಕೂಡಲಸಂಗಮದೇವಾ "

ಎಂದು ಬೇಡಿಕೊಳ್ಳುವುದನ್ನು ನೋಡಬಹುದು. ಚನ್ನಬಸವಣ್ಣನವರು ಪ್ರಸಾದಿಯ ಲಕ್ಷಣವನ್ನು

" ಅನರ್ಪಿತವ ಸಮನಿಸದೆ
ಬಂದುದ ಕಾಯದ ಕರ್ಣದ ಕೈಯಲ್ಲಿ ಕೊಟ್ಟು
ಲಿಂಗಸಹಿತ ಭೋಗಿಸುವಲ್ಲಿ ಪ್ರಸಾದಿ.
———————————
———————————

ಎಂದಿದ್ದಾರೆ. ಮನದ ಮಲಿನತೆಯನ್ನು ಕಳೆದು, ಸೂತಕ ಪಾತಕಗಳನ್ನು ನಷ್ಟಮಾಡಿ ಪ್ರಾವಿತ್ರ್ಯತೆಯು ತಾನೇ ತಾನಾಗಿ ಬೆಳಗುವ ಈ ಸ್ಥಲದ ಮಹತ್ತ್ವವನ್ನು ಬಸವಣ್ಣನವರ ವಚನ ತಿಳಿಯಪಡಿಸುತ್ತದೆ.

" ಹೊಲೆಯುಂಟೇ ಲಿಂಗವಿದ್ದೆಡೆಯಲ್ಲಿ ?
ಕುಲವುಂಟೇ ಜಂಗಮವಿದ್ದೆಡೆಯಲ್ಲಿ ?
ಎಂಜಲುಂಟೇ ಪ್ರಸಾದವಿದ್ದೆಡೆಯಲ್ಲಿ ?
ಅಪವಿತ್ರದ ನುಡಿಯು ನುಡಿವ ಸೂತಕವೆ ಪಾತಕ.
ನಿಷ್ಕಳಂಕ: ನಿಜೈಕ್ಯ, ತ್ರಿವಿಧ ನಿರ್ಣಯ
ಕೂಡಲಸಂಗಮದೇವ ನಿಮ್ಮ ಶರಣರಿಗಿಲ್ಲದಿಲ್ಲ "

ಪ್ರಸಾದಿ ತತ್ತ್ವದ ಘನತೆಯನ್ನು ಇನ್ನಷ್ಟು ಸ್ಪಷ್ಟ ಪಡಿಸಿದ ಅವರದೇ ಇನ್ನೊಂದು ವಚನ:-

" ನಿಮ್ಮ ಶ್ರೀಪಾದವ ಮುಟ್ಟಿ ಕರ್ಮ ಹರಿಯಿತ್ತು,
ನಿಮ್ಮ ಪ್ರಸಾದದಿಂದ ಭವಗೆಟ್ಟೆ ನೋಡಯ್ಯ
ಮನ ಪರುಷ, ದೃಷ್ಟಿ ಪರುಷ, ಭಾವ ಪರುಷ,
ಲಿಂಗ ಗಣಂಗಳು ಕೂಡಲಸಂಗಮ ದೇವ
ನಿಮ್ಮ ಶರಣರನುಭಾವದಿಂದ ನಾನು ಸುಖಿಯಾದೆನು "



ಮಡಿವಾಳ ಮಾಚಿದೇವನ ಈ ವಚನ ಪ್ರಸಾದಿ ತತ್ತ್ವದ ಪ್ರತೀಕದಂತಿದೆ

" ಅಂಗವೆ ಲಿಂಗವಾಗಿ, ಲಿಂಗವೆ ಪ್ರಾಣವಾಗಿ,
ಜಂಗಮವೆ ಸಂಗವಾಗಿ, ಸಂಗವೆ ಸುಸಂಗವಾಗಿ,
ಪ್ರಾಣವೆ ಪ್ರಸಾದವಾಗಿ, ಪ್ರಸಾದವೆ ಪ್ರಾಣವಾಗಿ,
ಇಂತೀ ತ್ರಿವಿಧದಲ್ಲಿ ಸಂಪನ್ನನಾದ ಸಮತಾಪ್ರಸಾದಿ,
ಸನ್ನಿಹಿತಪ್ರಸಾದಿ, ಸಮಾಧಾನ ಪ್ರಸಾದಿ ಕಲಿದೇವಯ್ಯಾ,
ಚೆನ್ನಬಸವಣ್ಣನ ಪ್ರಸಾದವ ಕೊಂಡು
ನಾನು ಬದುಕಿದೆನು ಕಾಣಾ ಪ್ರಭುವೆ"

ತನುಮನಧನವನ್ನು ಅರ್ಪಿಸಿದ ಮೇಲೆ ನನ್ನದೆಂಬ ಭಾವ ಅಡಗಿ ಅರ್ಪಿಸಿದುದೆಲ್ಲ ಶಿವನ ಪ್ರಸಾದ ಎನ್ನುತ್ತಾರೆ ಷಣ್ಮುಖ ಶಿವಯೋಗಿಗಳು. -

" ಮಾಡುವ ತನುವು ನೀವೇಯಾದಿರಾಗಿ
ನೀಡುವ ದ್ರವ್ಯವು ನೀವೇಯಾದಿರಾಗಿ,
ಕೊಡುವ ಮನವು ನೀವೇಯಾದಿರಾಗಿ,
ಅಖಂಡೇಶ್ವರಾ ನಾನೂ ಇಲ್ಲ, ನೀನೂ ಇಲ್ಲ, ಎನೇನೂ ಇಲ್ಲ"

"ಪೂಜೆಯ ಮಾಡಿರೋ ನಿಮ್ಮೊಳು ಪ್ರಾಣಲಿಂಗದ ಪೂಜೆಯ ಮಾಡಿರೋ" ಎಂಬ ಮುಪ್ಪಿನ ಷಡಕ್ಷರಿಗಳ ಕಾವ್ಯವಾಣಿಯಿಂದ ಪ್ರಾಣಲಿಂಗಿಯ ಸ್ವರೂಪ, ಲಕ್ಷಣ ತಿಳಿದುಬರುತ್ತದೆ. ಇಲ್ಲಿ ಭಕ್ತನ ಮನಸ್ಸು ಊರ್ಧ್ವಮುಖಿ( ಅಂತರ್ಮುಖಿ) ಯಾಗಿರುತ್ತದೆ. ಅಂಗಕ್ಕೆ ಚೈತನ್ಯ ಸ್ವರೂಪವಾದುದು ಪ್ರಾಣ. ಪ್ರಾಣಯಿದ್ದರೆ ಮಾತ್ರ ಈ ಅಂಗಕ್ಕೆ ಬೆಲೆಯಿದೆ. ಅಂಗಬೇರೆಯಲ್ಲ ಲಿಂಗಬೇರೆಯಲ್ಲ. ಎಂಬ ಭಾವವಿಲ್ಲಿ ಬಲಿಯುತ್ತದೆ. ಹೊರಗಿನ ಬಾಹ್ಯಪ್ರಜ್ಞೆ ತಪ್ಪಿ ಸ್ಥಿತಪ್ರಜ್ಞೆ ಮೂಡುತ್ತದೆ. ಇಷ್ಟ ಲಿಂಗದ ಪೂಜೆ ಪ್ರಾಣಲಿಂಗದ ಪೂಜೆಯಾಗುತ್ತದೆ. ಅವಧಾನ ಭಕ್ತಿ ಬೆಳೆಯುತ್ತದೆ.

ಮೋಳಿಗೆಯ ಮಾರಯ್ಯಗಳ ಪ್ರಾಣಲಿಂಗಸ್ಥಲದ ಸ್ವರೂಪವನ್ನು ಇಲ್ಲಿ ಹೇಳಿದ್ದಾರೆ :

" ಕ್ರೀಶುದ್ಧವಾದವಂಗೆ ಭಾವಶುದ್ಧ,
ಭಾವಶುದ್ಧವಾದವಂಗೆ ಆತ್ಮಶುದ್ಧ
ಆತ್ಮಶುದ್ಧವಾದವಂಗೆ ಅರಿವು ಕರಿಗೊಂಡು
ನಿಂದ ನಿಜವೆ ಪ್ರಾಣಲಿಂಗ ಸಂಬಂಧ ನಿಃಕಳಂಕಮಲ್ಲಿಕಾರ್ಜುನಾ"

ವ್ಯೋಮಮೂರುತಿ ವೀರವಿರಾಗಿ ಅನುಭವಮಂಟಪದ ಅಧ್ಯಕ್ಷ ಅಲ್ಲಮಪ್ರಭುದೇವರು



ಮೋ

ಪ್ರಾಣಲಿಂಗಸ್ಥಲದ ಎತ್ತರವನ್ನು ಹೀಗೆ ಎತ್ತಿ ಹಿಡಿದಿದ್ದಾರೆ :

"ಮನವೇ ಲಿಂಗವಾದ ಬಳಿಕ ನೆನಹುದಿನ್ನಾರನಯ್ಯಾ
ಭಾವವೇ ಐಕ್ಯವಾದ ಬಳಿಕ ಬಯಸುವುದಿನ್ನಾರನಯ್ಯಾ
ಭ್ರಮೆಯಳಿದು ನಿಜವು ಸಾಧ್ಯವಾದ ಬಳಿಕ
ಅರಿವುದಿನ್ನಾರನಯ್ಯಾ ಗುಹೇಶ್ವರಾ "

ಪ್ರಾಣಲಿಂಗಿ ಸ್ಥಾನವ ಹಿರಿಮೆಯನ್ನನು ಮಹಾದೇವಿಯಕ್ಕನಂತೂ ಕಾವ್ಯಮಯವಾಗಿ ಹೇಳಿದ್ದಾಳೆ :

"ಕಾಣುತ್ತ ಕಾಣುತ್ತ ಕಂಗಳ ಮುಚ್ಚಿದೆ ನೋಡವ್ವಾ;
ಕೇಳುತ್ತ ಕೇಳುತ್ತ ಮೈಮರೆದೊರಗಿದೆ ನೋಡವ್ವಾ;
ಹಾಸಿದ ಹಾಸಿಗೆಯ ಹಂಗಿಲ್ಲದೆ ಹೋಯಿತ್ತು ಕೇಳವ್ವಾ;
ಚನ್ನಮಲ್ಲಿಕಾರ್ಜುನ. ದೇವರ ದೇವನ ಕೂಡುವ ಕೂಟವ
ನಾನೇನೆಂದರಿಯದೆ ಮರೆದೆ ಕಾಣವ್ವಾ "

ಎಡೆಯೂರ ಸಿದ್ಧಲಿಂಗೇಶ್ವರ ಶಿವಯೋಗಿಗಳು ಪ್ರಾಣಲಿಂಗಿಯ ಮ ಹ ತ್ವ ವ ನ್ನು ಮನೋಹರವಾಗಿ ಪ್ರತಿಪಾದಿಸಿದ್ದಾರೆ.

"ಕಾಯ ಲಿಂಗಾರ್ಪಿತವಾದ ಬಳಿಕ ಕರ್ಮತ್ರಯಂಗಳು ಇರಲಾಗದು ನೋಡಾ.
ಜೀವಲಿಂಗಾರ್ಪಿತವಾದ ಬಳಿಕ ಸಂಸಾರವ್ಯಾಪ್ತಿಯಾದ ಜೀವನ ಗುಣ ಇರಲಾಗದು,
ಕರಣಂಗಳು ಲಿಂಗಾರ್ಪಿತವಾದ ಬಳಿಕ ಕರಣಂಗಳೆಲ್ಲವು ಲಿಂಗ ಕಿರಣಂಗಳಾಗಿ, ಅದು ಅರ್ಪಿತವಲ್ಲ ನೋಡಾ
ಆ ಲಿಂಗಕಿರಣವೇ ಹರಣವಾಗಿರಬೇಕು ನೋಡಾ
ಕಾಯದ ಜೀವದ ಕರಣದ ಗುಣವ ಕಳೆಯದೆ ಲಿಂಗಾರ್ಪಿತ ಪ್ರಸಾದಿಗಳೆಂಬ
ಪ್ರಪಂಚಗಳ ಮೆಚ್ಚನು ಕಾಣಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ"

ಬಸವಣ್ಣನವರು ಆಡಂಬರದ ಮಾತಿನ ಮಲ್ಲರನ್ನು ಚೆನ್ನಾಗಿ ಛೇಡಿಸಿದ್ದಾರೆ ಈ ವಚನದಲ್ಲಿ :

"ಹತ್ತುಸಾವಿರ ಗೀತವಹಾಡಿ ಅರ್ಥವಿಟ್ಟಲ್ಲಿ ಫಲವೇನು
ಮುಟ್ಟುವತೆರನನರಿಯದನ್ನಕ್ಕ ?
ಕಟ್ಟಿದರೇನು; ಬಿಟ್ಟರೇನು,
ಮನವು ಲಿಂಗದಲ್ಲಿ ಮುಟ್ಟದನ್ನಕ್ಕ ?
ಮಾತಿನಲಿ ಒಲಿಸಿ ಮಹತ್ತಪ್ಪ ಲಿಂಗವ ಕಂಡಿಹೆನೆಂಬ
ಪಾತಕರ ಮೆಚ್ಚ ನಮ್ಮ ಕೂಡಲಸಂಗಮದೇವ"



ಷಣ್ಮುಖ ಶಿವಯೋಗಿಗಳು ಪ್ರಾಣಲಿಂಗಿ ಸ್ಥಲದ ವಸ್ತುನಿಷ್ಠತೆಯನ್ನು ಯಥಾರ್ಥವಾಗಿ ನಮ್ಮ ಮುಂದೆ ಬಿಚ್ಚಿಟ್ಟಿದ್ದಾರೆ –

" ಪ್ರಾಣಲಿಂಗ ಸಂಬಂಧಿಗಳೆಂದು ನುಡಿವವರು ಅನೇಕರುಂಟು
ಪ್ರಾಣಲಿಂಗದ ಕಳೆಯನಾರೂ ಅರಿಯರಲ್ಲಾ
ಪ್ರಾಣಲಿಂಗ ಕಳೆ ಎಂತೆಂದಡೆ,
ಆಧಾರದಲ್ಲಿ ಎಳೆಯ ಸೂರ್ಯನಂತೆ
ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು
ಸ್ವಾಧಿಷ್ಠಾನದಲ್ಲಿ ಪೂರ್ಣಚಂದ್ರನಂತೆ
ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು
ಮಣಿಪೂರಕದಲ್ಲಿ ಮಿಂಚಿನ ಲತೆಯಂತೆ
ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು
ಅನಾಹತದಲ್ಲಿ ಸ್ಪಟಿಕದ ಶಲಾಕೆಯಂತೆ
ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು
ವಿಶುದ್ಧಿಯಲ್ಲಿ ಮೌಕ್ತಿಕದ ಗೊಂಚಲದಂತೆ
ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು
ಅಜ್ಞೆಯಲ್ಲಿ ರತ್ನದ ದೀಪ್ತಿಯಂತೆ
ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು
ಬ್ರಹ್ಮರಂಧ್ರದಲ್ಲಿ ಸ್ವಯಂಜ್ಯೋತಿಯಂತೆ
ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು
ಶಿಖೆಯಲ್ಲಿ ಶುದ್ಧ ತಾರೆಯಂತೆ
ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು
ಪಶ್ಚಿಮದಲ್ಲಿ ಉಳುಕನಕ್ಷತ್ರದಂತೆ
ಬೆಳಗುತಿರ್ಪುದು ನೋಡಾ ಪ್ರಾಣಲಿಂಗವು
ಇಂತಪ್ಪ ಪ್ರಾಣಲಿಂಗದ ಕಳೆಯನರಿಯದೆ.
ಪ್ರಾಣನ ಸಂಯೋಗಿಸಿ, ಪ್ರಳಯದ ಗೆಲಲರಿಯದೆ,
ಮಾತಿನ ಮಾಲೆಯ ನುಡಿದು, ನೀತಿಶಾಸ್ತ್ರ ಘಾತಕದ ಕಥೆಗಳ ಕಲಿತು,
ಓತು ಎಲ್ಲರೊಡನೆ ಹೇಳಿ, ಚಾತುರ್ಯನೆನೆಸಿಕೊಂಡು
ಒಡಲ ಹೊರೆವ ಉದರ ಘಾತಕರ
ಪ್ರಾಣಲಿಂಗ ಸಂಬಂಧಿಗಳೆಂತಿಂಬೆವಯ್ಯಾ, ಅಖಂಡೇಶ್ವರಾ ? "

ಪ್ರಾಣಲಿಂಗಿಯ ಸಾಮರಸ್ಯದ ಅರಿವನ್ನು ಚನ್ನಬಸವಣ್ಣನವರು ಇಲ್ಲಿ ತ್ತರಿಬಿಸಿದ್ದಾರೆ

"ಅಂಗದದಿಂದ ಲಿಂಗಸುಖ, ಲಿಂಗದಿಂದ ಅಂಗಸುಖ,
ಅಂಗಲಿಂಗಸಂಗದಿಂದ ಪರಮಸುಖ ನೋಡಯ್ಯ
ಅಂಗಲಿಂಗಸಂಗಸುಖವನು, ಕೂಡಲಚನ್ನಸಂಗಯ್ಯನಲ್ಲಿ
ಲಿಂಗೈಕ್ಯನೇ ಬಲ್ಲ"

ಮಹಾನುಭಾವಿ ಬಸವಣ್ಣನವರು "ಅರಿದಡೆ ಶರಣ ಮರೆದಡೆ ಮಾನವ" ಎಂದು ಸೂತ್ರರೂಪವಾಗಿ ಶರಣಸ್ಥಲದ ಲಕ್ಷಣವನ್ನು ಅರ್ಥಪೂರ್ಣವಾಗಿ ನಿವೇದಿಸಿದ್ದಾರೆ. ಶರಣಸತಿ ಲಿಂಗ ಪತಿ ಎಂಬ ಭಾವವಿಲ್ಲಿದೆ. "ಶಿವನಿಗಿಂತ ಶಿವಶರಣರೇ ಶ್ರೇಷ್ಠರು" ಎನ್ನುವ ಅನುಭಾವಿಗಳ ಮಾತಿನಲ್ಲಿ ಅರ್ಥವಿದೆ. ಶರಣ ಸ್ಥಲದ ಭಕ್ತನ ನಿಲುವು ಪರವಸ್ತುವಿನಲ್ಲಿ ಸರ್ವಸಮರ್ಪಣಭಾವವನ್ನು ಹೊಂದಿರುವುದೇ ಆಗಿದೆ

ಷಣ್ಮುಖ ಶಿವಯೋಗಿಗಳು ಶರಣನ ನಿಲುವನ್ನು ಈ ರೀತಿ ನಿರೂಪಿಸಿದ್ದಾರೆ.

'ನಡೆಯೊಳಗೆ ನುಡಿ ತುಂಬಿ, ನುಡಿಯೊಳಗೆ ನಡೆ ತುಂಬಿ,
ನಡೆನುಡಿ ಎರಡನು ಪರಿಪೂರ್ಣ ತುಂಬಿ,
ಲಿಂಗವ ಕೂಡ ಬಲ್ಲಾತನೇ ಶರಣ ನೋಡಾ ಅಖಂಡೇಶ್ವರಾ

ಬಸವಣ್ಣನವರು ಶರಣನ ಇರವನ್ನು ಇಲ್ಲಿ ತೋರಿದ್ದಾರೆ –

"ಶರಣ ನಿದ್ರೆಗೈದಡೆ ಜಪ ಕಾಣಿರೋ,
ಶರಣನೆದ್ದು ಕುಳಿತಡೆ ಶಿವರಾತ್ರಿ ಕಾಣಿರೋ
ಶರಣ ನಡೆದುದೇ ಪಾವನ ಕಾಣಿರೋ
ಶರಣ ನುಡಿದುದೇ ಶಿವತತ್ತ್ವ ಕಾಣಿರೋ
ಕೂಡಲ ಸಂಗನ ಶರಣನ ಕಾಯವೇ ಕೈಲಾಸ ಕಾಣಿರೋ."

ಎಂದು ಬಣ್ಣಿಸಿದರೆ ಶಿವಯೋಗಿ ಸಿದ್ಧರಾಮನು ಮತ್ತೊಂದು ರೀತಿಯಲ್ಲಿ ವಿವರಿಸಿದ್ದಾನೆ.

"ಶರಣನ ಜಾಗ್ರತಿಯೆ ಶಿವರಾತ್ರಿ ಕಂಡಾ ಮನವೆ
ಶರಣನ ನಿದ್ರೆಯ ಶಿವಯೋಗ ಸಮಾಧಿ ಕಂಡಾ ಮನವೆ
ಶರಣನ ನುಡಿಯೆ ಶ್ರೀರುದ್ರ ಪಂಚಬ್ರಹ್ಮೋಪನಿಷತ್ತು ಕಂಡಾಮನವೆ
ಶರಣನ ನಡೆಯೆ ಮುಕ್ತಿಸೋಪಾನ ಕಂಡಾ ಮನವೆ
ಶರಣನ ಭೋಜನವೆ ಕಪಿಲಸಿದ್ಧ ಮಲ್ಲಿಕಾರ್ಜುನನರ್ಪಣ ಕಂಡಾ ಮನವೆ



ಅಲ್ಲಮಪ್ರಭುದೇವರು ಶರಣರ ಸುಳುಹಿನ ಸೊಗಸನ್ನು ಈ ವಚನದಲ್ಲಿ ಬಿಂಬಿಸಿದ್ದಾರೆ.

'ಕಂಡುದೆಲ್ಲಪಾವನ, ಕೇಳುತ್ತಿಲ್ಲ ಪರಮಬೋಧೆ
ಮುಟ್ಟಿತ್ತೆಲ್ಲ ಪರುಷದ ಸೋಂಕು
ಒಡನೆ ನುಡಿದವರೆಲ್ಲರೂ ಸದ್ಯೋನ್ಮುಕ್ತರು
ಸುಳಿದ ಸುಳುಹೆಲ್ಲ ಜಗತ್ಪಾವನ ಮೆಟ್ಟಿದ ಧರೆಯೆಲ್ಲವೂ ಅವಿಮುಕ್ತಕ್ಷೇತ್ರ
ಸೋಂಕಿದ ಜಲ್ಲವೆಲ್ಲವೂ ಪುಣ್ಯತೀರ್ಥಂಗಳು
ಶರಣೆಂದು ಭಕ್ತಿಯ ಮಾಡಿದವರೆಲ್ಲರೂ ಸಾಯುಜ್ಯರು.
ಗುಹೇಶ್ವರನ ಶರಣನ ಸುಳುಹಿನ ಸೊಗಸನುಪಮಿಸಬಾರದು"

ಶರಣನ ವಿಶಿಷ್ಟತೆಯನ್ನು ಮಾರ್ಮಿಕವಾಗಿ ಚಿತ್ರಿಸಿದ ಅದಯ್ಯನ ಈ ವಚನ ಉದ್ಬೋಧಕವಾಗಿದೆ –

"ಹರವಿರ್ದು ಹರಣವಿಲ್ಲ, ಹರಣಲಿಂಗದಲ್ಲಿ ನಿರಿಯಾಣವಾಯಿತ್ತಾಗಿ
ಮನವಿರ್ದು ಮನವಿಲ್ಲ, ಮನವು ಮಹದಲ್ಲಿ ಲೀಯವಾಯಿತ್ತಾಗಿ
ಜೀವವಿರ್ದು ಜೀವವಿಲ್ಲ, ಜೀವಸಜ್ಜೀವವಾಗಿ ಪರಮನಲ್ಲ ಐಕ್ಯವಾಯಿತ್ತಾಗಿ
ಭಾವವಿರ್ದು ಭಾವವಿಲ್ಲ, ನಿರ್ಭಾವದಲ್ಲಿ ನಿಂದಿತ್ತಾಗಿ
ಕರಣಂಗಳಿರ್ದು ಕರಣಂಗಳಿಲ್ಲ, ಕರಣಂಗಳು ಲಿಂಗದ ಕಿರಣಂಗಳನೈದಿದವವಾಗಿ
ಇಂತು ಸರ್ವವಿರ್ದು ಸರ್ವವಿಲ್ಲ, ಇದು ಕಾರಣ ಸೌರಾಷ್ಟ್ರಸೋಮೇಶ್ವರಾ,
ನಿಮ್ಮ ಶರಣರು ಉಪವಾಸಿಗಳು, ಬಳಸಿ ಬ್ರಹ್ಮಚಾರಿಗಳು

ಶರಣರ ಅಸಾಮಾನ್ಯ ವ್ಯಕ್ತಿತ್ವವನ್ನು ಬಸವಣ್ಣನವರು ಪ್ರಸ್ತಾಪಿಸಿದ ವಚನ ಹೀಗಿದೆ:

'ಕೆರೆಹಳ್ಳ ಬಾವಿಗಳು ಮೈದೆಗೆದರೆ
ಗುಳ್ಳೆ ಗೊರಜೆ ಚಿಪ್ಪುಗಳು ಕಾಣಬಹುದು;
ವಾರಿಧಿ ಮೈದೆಗೆದರೆ ರತ್ನಂಗಳು ಕಾಣಬಹುದು
ಕೂಡಲಸಂಗನ ಶರಣರು ಮನದೆರೆದು ಮಾತನಾಡಿದರೆ
ಲಿಂಗವೇ ಕಾಣಬಹುದು.'

ಹುಟ್ಟಿದವರೆಲ್ಲರೂ ಶರಣರಾಗಲು ಸಾಧ್ಯವಿಲ್ಲ ಎಂಬಮಾತು ಬಸವಣ್ಣನವರ ವಚನದಿಂದ ಅರಿಯಬಹುದು :

'ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ,
ತೆರಹಿಲ್ಲದ ಸಂಭಾಷಣೆಯ ಸುಖವು,

ತೆರಹಿಲ್ಲದ ನಂಬುಗೆ ಸ್ವಾನುಭಾವಸುಖ
ತೆರಹಿಲ್ಲದ ಮಹಿಮೆ ತೆರಹಿಲ್ಲದವಿಚಾರ
ಕೂಡಲಸಂಗಮದೇವಾ, ನಿಮ್ಮ ಶರಣಂಗೆ'

ಇಂಥ ಶರಣರ ಹಿರಿಮೆಯನ್ನು ಷಟ್‌ಸ್ಥಲ ಚಕ್ರವರ್ತಿ ಅವಿರಳಜ್ಞಾನಿ ಚನ್ನಬಸವಣ್ಣನವರು ಎತ್ತಿ ಹಿಡಿದಿದ್ದಾರೆ.

"ಬಟ್ಟಬಯಲೆಲ್ಲ ಗಟ್ಟಿಗೊಂಡಡೆ ಸ್ವರ್ಗಮರ್ತ್ಯಪಾತಾಳಕ್ಕೆ ಠಾವಿನ್ನೆಲ್ಲಿಯುದೊ ?
ಮೇಘದ ಜಲವೆಲ್ಲ ನಿರ್ಮಳ ಮುತ್ತಾದರೆ ಸಪ್ತಸಾಗರಕೆ ಉದಕವಿನ್ನೆಲ್ಲಿಯದಯ್ಯಾ ?
ಕಷ್ಟಜೀವಿ ಮಾನವರೆಲ್ಲ ನೆಟ್ಟನೆ ಶಿವಜ್ಞಾನಿಗಳಾದರೆ ಭವದಬೆಳೆ ಇನ್ನೆಲ್ಲಿಯದಯ್ಯಾ ?
ಇದು ಕಾರಣಕೂಡಲಚನ್ನಸಂಗಯ್ಯನಲ್ಲಿ ಲಕ್ಷಕ್ಕೊಬ್ಬ ಭಕ್ತ ಕೋಟಿಗೊಬ್ಬಶರಣ"

ಷಟಸ್ಥಲದ ಕೊನೆಯ ಮೆಟ್ಟಲೇ ಐಕ್ಯಸ್ಥಲ. ಜೀವಾತ್ಮನು ಪರಮಾತ್ಮನಲ್ಲಿ ಒಂದಾಗಿ ಅಮೃತ ಫಲ ಪಡೆಯುವುದು. ಲಿಂಗಾಂಗ ಸಾಮರಸ್ಯದ ಕೊನೆಯ ಮೆಟ್ಟಲಕ್ಕೇರಿವ ಶರಣನ ಸಹಜ ಸ್ಥಿತಿಯನ್ನು ವಚನಗಳ ಮುಖಾಂತರ ಇಲ್ಲಿ ತಿಳಿಯಬಹುದು. ಎಡೆಯೂರ ಸಿದ್ಧಲಿಂಗೇಶ್ವರರ ವಚನವೊಂದು ಹೀಗಿದೆ :

"ಗಾಳಿ ಗಂಧವನಪ್ಪಿದಂತೆ, ಬಯಲು ಬಯಲನಪ್ಪಿದಂತೆ
ಬೆಳಗು ಬೆಳಗನಪ್ಪಿ ಮಹಾಬೆಳಗಾದಂತೆ ಶರಣ ಲಿಂಗವನಪ್ಪಿ
ಮಹಾಲಿಂಗವೇ ತಾನು ತಾನಾಗಿ ನಿರ್ವಯಲಾದನು ನೋಡಾ
ಗುರುಶಿವ ಸಿದ್ಧೇಶ್ವರ ಪ್ರಭುವೇ '

ಸಾವಿಲ್ಲದ ಕೇಡಿಲ್ಲದ ಚೆಲುವನನ್ನು ಕಂಡ ಅನಿರ್ವಚನೀಯ ಅನುಭಾವವನ್ನು ಅಕ್ಕ ಮಹಾದೇವಿ ಮನೋಜ್ಞವಾಗಿ ವರ್ಣಿಸಿದ್ದಾಳೆ :

"ಲಿಂಗವೆನ್ನ ಲಿಂಗೈಕ್ಯವೆನ್ನೆ
ಸಂಗವೆನ್ನ ಸಮರಸವೆನ್ನೆ
ಆಯಿತ್ತೆನ್ನೆ ಆಗದೆನ್ನೆ
ನೀನೆನ್ನ ನಾನೆನ್ನೆ, ಚನ್ನಮಲ್ಲಿಕಾರ್ಜುನನನಲ್ಲಿ ಲಿಂಗೈಕ್ಯವಾದ ಬಳಿಕ
ಏನೂ ಎನ್ನೆ'

ಶಿವಯೋಗಿ ಸಿದ್ಧರಾಮನ ಈ ವಚನ ಕೈಲಾಸದ ಕಲ್ಪನೆಯನ್ನು ಹೊಡೆದು ಹಾಕಿದೆ:

"ಕೈಲಾಸ ಕೈಲಾಸವೆಂದು ಬಡಿದಾಡುವ
ಅಣ್ಣಗಳಿರಾ ಕೇಳಿರಯ್ಯಾ



ಕೈಲಾಸವೆಂಬುದೊಂದು ಹಾಳುಬೆಟ್ಟ
ಅಲ್ಲಿರುವ ಮುನಿಗಳೆಲ್ಲರೂ ಜೀವಗಳ್ಳರು
ಅಲ್ಲಿರ್ದ ಚಂದ್ರಶೇಖರನು ಬಹುಹೆಡ್ಡ
ಇದರಾಡಂಬರವೇಕಯ್ಯಾ,
ಎಮ್ಮ ಪುರಾತರಿಗೆ ಸದಾಚಾರದಿಂದ ವರ್ತಿಸಿ
ಲಿಂಗಾಂಗ ಸಾಮರಸ್ಯವ ತಿಳಿದು
ನಿಮ್ಮ ಪಾದಪದ್ಮದೊಳು ಬಯಲಾದ
ಪದವೇ ಕೈಲಾಸವಯ್ಯಾ
ಕಪಿಲಸಿದ್ಧ ಮಲ್ಲಿಕಾರ್ಜುನ"

ಅದುದರಿಂದಲೆ ಶರಣರಿಗೆ ಸಾವಿಲ್ಲ ಎಂಬ ಮಾತನ್ನು ಬಸವಣ್ಣನವರು ಹೀಗೆ ಸ್ಪಷ್ಟೀಕರಿಸಿದ್ದಾರೆ.

"ಎಮ್ಮವರಿಗೆ ಸಾವಿಲ್ಲ ಎಮ್ಮವರು ಸಾವರಿಯರು
ಸಾವೆಂಬುದು ಸಯವಲ್ಲ ಲಿಂಗದಲ್ಲಿ ಉದಯವಾದ ಲಿಂಗೈಕ್ಯರಿಗೆ
ಆ ಲಿಂಗದಲ್ಲಿಯಲ್ಲದೆ ಬೇರೆ ಮತ್ತೊಂದೆಡೆಯಿಲ್ಲ.
ಕೂಡಲಸಂಗಮದೇವರ ಶರಣ ಸೊಡ್ಡಳಬಾಚರಸರು
ನಿಜಲಿಂಗದೊಡಲೊಳಗೆ ಬಗಿದು ಹೊಕ್ಕಡೆ
ಉಪಮಿಸಬಲ್ಲವರ ಕಾಣೆನು"

ಐಕ್ಯಸ್ಥಾನದ ನಿಲುಮೆಯನ್ನು ಮಹಾಶರಣೆ ಸತ್ಯಕ್ಕ ಬಹು ಸೊಗಸಾಗಿ ವಿಶ್ಲೇಷಿಸಿದ್ದಾಳೆ.

"ಉದಕದೊಳಗಣ ಎಚ್ಚಿನಂತೆ ಲಿಂಗೈಕ್ಯವು
ವಾಯುನುಂಗಿದ ಪರಿಮಳದಂತೆ ಲಿಂಗೈಕ್ಯವು
ಉರಿಯೊಳಡಗಿದ ಕರ್ಪೂರದಂತೆ ಲಿಂಗೈಕ್ಯವು
ಅರಿವು ನುಂಗಿದ ಮರಹಿನಂತೆ ಲಿಂಗೈಕ್ಯವು
ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾಸಹ ಎಂದುದಾಗಿ,
ವಾಙ್ಮನಕ್ಕೆ ಅಗೋಚರವಾದ ಮಹಾಶರಣನ ಒಳಕೊಂಡು
ಥಳಥಳಿಸಿ ಬೆಳಬೆಳಗಿ ಹೊಳೆವುತ್ತ
ನಿಶ್ಯಬ್ದಬ್ರಹ್ಮವಾಗಿರ್ದನಯ್ಯಾ ನಮ್ಮ ಶಂಭುಜಕ್ಕೇಶ್ವರನು

ವುಣ್ಯದ ಪುತ್ಥಳಿಯಾದ ಅಕ್ಕನಾಗಮ್ಮನು ಷಟ್‌ಸ್ಥಲದ ಪ್ರತಿನಿಧಿಯಾಗಿ ಬಾಳಿ ಬೆಳಗಿದ ಶರಣರ ಸಾಂಕೇತಿಕ ಸ್ಥಲವನ್ನು ನಿರ್ದೇಶಿಸಿದ ಈ ವಚನ ಅರ್ಥಪೂರ್ಣವಾಗಿದೆ.

ಗುರುಸಂಬಂಧಿ ಗುರುಃಭಕ್ತಯ್ಯನು
ಲಿಂಗಸಂಬಂಧಿ ಪ್ರಭುದೇವರು
ಜಂಗಮ ಸಂಬಂಧಿ ಸಿದ್ಧರಾಮನು
ಪ್ರಸಾದಸಂಬಂಧಿ ಮರುಳಶಂಕರದೇವರು
ಪ್ರಾಣಲಿಂಗ ಸಂಬಂಧಿ ಅನಿಮಿಷದೇವರು
ಶರಣಸಂಬಂಧಿ ಘಟ್ಟಿವಾಳಯ್ಯನು
ಐಕ್ಯಸಂಬಂಧಿ ಅಜಗಣ್ಣಯ್ಯನು
ಸರ್ವಾಚಾರಸಂಬಂಧಿ ಚನ್ನಬಸವಣ್ಣನು
ಇಂತಿವರ ಸಂಬಂಧ ಎನ್ನ ಸರ್ವಾಂಗದಲ್ಲಿ ಸಿಂದು
ಬಸವಣ್ಣಪ್ರಿಯ ಚನ್ನಸಂಗಯ್ಯನ
ಹೃದಯಕಮಲದಲ್ಲಿ ನಿಜವಾಸಿಯಾಗಿದ್ದೆನು.






## ಪರಮ ಪೂಜ್ಯ, ತ್ರಿವಿಧ ದಾಸೋಹಿ, ಶಿವಯೋಗಿ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ 84 ನೇ ಜನ್ಮದಿನೋತ್ಸವದ ಸಂಕ್ಷಿಪ್ತ ವರದಿ.

- ಶ್ರೀ ಹೆಚ್. ಬಿ. ಗಂಗಾಧರಯ್ಯ.

ದಿನಾಂಕ 28-4-91ರಂದು ಪರಮ ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ 84 ನೇ ಜನ್ಮ ದಿನೋತ್ಸವ ಶ್ರೀ ಮಠದಲ್ಲಿ ಅಭೂತ ಪೂರ್ಣವಾಗಿ " **ಗುರು ವಂದನ** " ಸಮಾರಂಭವಾಗಿ ಆಚರಿಸಲಾಯಿತು. ಕನ್ನಡನಾಡಿನ ಉದ್ದಗಲದಿಂದ ಆಗಮಿಸಿದ ಭಕ್ತ ಕೋಟಿಗೆ ದಿವ್ಯವಾದ ಹಬ್ಬವಾಗಿ ಪರಿಣಮಿಸಿದ ಗುರುಗಳ ಜನ್ಮದಿನೋತ್ಸವ ಅವಿಸ್ಮರಣೀಯವಾಯಿತು. 1-4-1991 ಕ್ಕೆ 83 ವರ್ಷಗಳನ್ನು ಮುಗಿಸಿ 84ಕ್ಕೆ ಪಾದಾರ್ಪಣ ಮಾಡಿದ ಪೂಜ್ಯ ಶ್ರೀ ಗಳವರ ಹುಟ್ಟುಹಬ್ಬ ವ್ಯಕ್ತಿ ಪೂಜೆಯೆನಿಸಿದೆ. ಸಾರ್ಥಕ ಸೇವಾ ತಪಸ್ವಿಯ ವಂದನಾ ಸಮಾರಂಭವಾದದ್ದು ಅರ್ಥಪೂರ್ಣವಾಯಿತು.

ಹತ್ತು ಗಂಟೆಗೆ ಸರಿಯಾಗಿ ಹಳೇಮಠದಿಂದ ಪ್ರಾರಂಭವಾದ ಉತ್ಸವ ಮಂಗಳ ವಾದ್ಯ, ಪೂರ್ಣ ಕುಂಭ, ಕಲಶಕನ್ನಡಿಗಳ ಸಮೇತ, ವೀರಗಾಸೆ, ಶ್ರೀ ಹೆಚ್.ಎಸ್. ನೀಲಕಂಠಯ್ಯನವರ ವೀರಭದ್ರನೃತ್ಯ, ಧರ್ಮಲಾಂಛನಗಳೊಂದಿಗೆ ವಿವಿಧ ಮಠಗಳಿಂದ ಆಗಮಿಸಿದ್ದ ಮಠಾಧೀಶ್ವರ ಜೊತೆಯಲ್ಲಿ ಮುಖ್ಯ ಅತಿಥಿಗಳನ್ನೊಳಗೊಂಡು ಭಕ್ತ ಕೋಟಿಯ ಜಯಘೋಷದ ಮಧ್ಯೆ ಬೃಹತ್ ಜನಸ್ತೋಮದಿಂದ ಕಿಕ್ಕಿರಿದು ತುಂಬಿದ್ದ ಶ್ರೀ ಉದ್ದಾನ ಶಿವಯೋಗಿ ಶ್ರೀ ಸಭಾಂಗಣಕ್ಕೆ ಬಂದಾಗ ಹನ್ನೆರಡನೆಯ ಶತಮಾನದ ಕಲ್ಯಾಣ ಎದ್ದು ಬಂದಂತೆ ಭಾಸವಾಗುತ್ತಿತ್ತು.

ವೇಳೆಗೆ ಸರಿಯಾಗಿ ಸಭಾ ಕಾರ್ಯಕ್ರಮಗಳು ಪ್ರಾರಂಭವಾದುವು. ಶ್ರೀಮಠದ ಸಂಸ್ಕೃತ ಮತ್ತು ವೇದ ವಿದ್ವಾಂಸರಿಂದ ವೇದಘೋಷವಾದ ನಂತರ ವಿದ್ಯಾರ್ಥಿಗಳಾದ ಶ್ರೀ ರವಿಚಂದ್ರ ಹಾಗೂ ಶ್ರೀ ನಂದೀಶರಿಂದ ವಿದ್ವಾನ್ ಶ್ರೀ ಕೆ.ಎನ್. ವೆಂಕಟರಾಮಯ್ಯನವರ ಮಾರ್ಗದರ್ಶನದಲ್ಲಿ ಪ್ರಾರ್ಥನೆ ವಚನ ಗೀತೆ ‚‚ಧರಣಿಯ ಮೇಲೊಂದು ಪಿರಿದಪ್ಪ ಅಂಗಡಿಯನಿಕ್ಕಿ ಹರವ ಕುಳ್ಳಿರ್ದನಮ್ಮ ಮಹಾದೇವಶೆಟ್ಟಿ'' ಎಂಬುದರೊಂದಿಗೆ ಪ್ರಾರಂಭವಾಯಿತು ಶ್ರೀ ಮಠದ ಹಳೆಯ ವಿದ್ಯಾರ್ಥಿ ವಿದ್ವಾನ್ ಕೆ ಎಂ. ರೇವಣ್ಣ ಸಿದ್ದಯ್ಯನವರಿಂದ ಸ್ವಾಗತ ಪರಿಚಯಗಳಾದ ಮೇಲೆ ಶ್ರೀ ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆಯವರಿಂದ ಜ್ಯೋತಿ ಬೆಳಗಿಸುವುದರ ಮೂಲಕ ಸಭಾ ಕಾರ್ಯಕ್ರಮಗಳು ಉದ್ಘಾಟಿತವಾದುವು ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಸಹ ಕಾರ್ಯ

ದರ್ಶಿಗಳಾದ ಶ್ರೀ ಟಿ.ಕೆ. ನಂಜುಂಡಪ್ಪನವರಿಂದ ವಿವಿಧ ಪೂಜ್ಯರಿಂದ, ಗಣ್ಯರಿಂದ ಬಂದಿದ್ದ ಸಂದೇಶ ವಾಚನವಾಯಿತು. ಅನಂತರ ಶ್ರೀ ಮಠದ ಕಿರಿಯ ಸ್ವಾಮಿಗಳಾದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳ ಭಕ್ತಿ ಸಮರ್ಪಣಾ ನುಡಿಗಳಾದ ಮೇಲೆ ಪೂಜ್ಯರು ಪರಮಪೂಜ್ಯ ಶ್ರೀ ಶ್ರೀ ಗಳವರಿಗೆ ಸಮಾರಂಭದ ಪ್ರಾಣ ಚೈತನ್ಯ ಮಹಾಮೂರ್ತಿಗಳಿಗೆ ಮಾಲಾರ್ಪಣೆ ಮಾಡಿ ಮಣಿದರು ಅಲ್ಲಿಂದ ಭಕ್ತ ಕೋಟಿಯಿಂದ ಮಾಲಾರ್ಪಣೆ ಸ್ವಾಮಿಗಳಿಗೆ ಪ್ರಾರಂಭವಾಗಿ ಒಂದು ಘಂಟೆಯ ತನಕ ನಿರಂತರವಾಗಿ ನಡೆದು 'ಪುಷ್ಪ ಪರ್ವತ' ದ ಮಧ್ಯೆ ಶ್ರೀಗಳ' ದಿವ್ಯ ತೇಜೋರೂಪ ಕಂಡ ಭಕ್ತ ಸ್ತೋಮ ಧನ್ಯತೆಯನ್ನನುಭವಿಸಿತು. ಇದೇ ಸಂದರ್ಭದಲ್ಲಿ ನಾಡಿನ ಪ್ರಖ್ಯಾತ ಗಾಯಕಿ ಕಸ್ತೂರಿ ಶಂಕರ್‌ರವರು ಭಕ್ತಿ ಗೀತೆ ಹಾಗೂ ವಚನ ಸಂಗೀತವನ್ನು ನೀಡಿ ಸಮಾ-ರಂಭಕ್ಕೆ ಶೋಭೆಯನ್ನು ತಂದದ್ದು ಮಹತ್ವ ಪೂರ್ಣವೆನಿಸಿತು.

"ಸಿದ್ಧಗಂಗಾ ಮಠದಿಂದ ಆಗುತ್ತಿರುವ ಸಾಮಾಜಿಕ ಕೆಲಸ ಗ್ರಾಮೀಣ ಜನತೆಯ ಮೇಲೆ ಆಗುತ್ತಿರುವ ಪರಿಣಾಮ ಕೋಮು ಸಾಮರಸ್ಯ ಮತ್ತು ವಿದ್ಯಾಭಿವೃದ್ಧಿ ಹಾಗೂ ಆರ್ಥಿಕ ಪ್ರಗತಿ ಎಷ್ಟರ ಮಟ್ಟಿಗೆ ಆಗುತ್ತಿದೆ ಎಂಬ ಬಗ್ಗೆ ಸಂಶೋಧನೆಗಳಾಗಬೇಕು ಎಂದು ಧರ್ಮಸ್ಥಳದ ಧರ್ಮಾಧಿಕಾರಿ ವೀರೇಂದ್ರ ಹೆಗ್ಗಡೆಯವರು ಅಭಿಪ್ರಾಯಪಟ್ಟರು. ಶಿವಕುಮಾರಸ್ವಾಮಿಗಳಿಗೆ ಭಕ್ತಿ ಸಮರ್ಪಣೆ ಮಾಡುವ ಮೂಲಕ ಅಸಂಖ್ಯಾತ ಭಕ್ತಾದಿಗಳು ಈಗಾಗಲೇ ಜನ್ಮದಿನೋತ್ಸವವನ್ನೂ ಉದ್ಘಾಟಿಸಿದ್ದಾರೆ. ಆದ್ದರಿಂದ ತಾವು ಸಾಂಪ್ರದಾಯಿಕವಾಗಿ ಕಾರ್ಯಕ್ರಮವನ್ನು ಉದ್ಘಾಟಿಸುತ್ತಿರುವುದಾಗಿ ಅವರು ನುಡಿದರು. ಇಂದು ಭಕ್ತಾದಿಗಳು ಆಚರಿಸುತ್ತಿರುವ ಜನ್ಮದಿನೋತ್ಸವದ ಮೂಲಕ ಶ್ರೀಗಳ ಮೇಲಿನ ಹೊಣೆಯನ್ನು ಜ್ಞಾಪಿಸುವ ಕೆಲಸ ಮಾಡಲಾಗುತ್ತಿದೆ ಎಂದರು. ಗುರು ಪೀಠಗಳು ಹೇಗಿರಬೇಕು ಎಂತಹ ಕೆಲಸಗಳನ್ನು ಮಾಡಬೇಕು ಎಂಬುದಕ್ಕೆ ಡಾ|| ಶಿವಕುಮಾರಸ್ವಾಮಿಗಳು ಸಾಕ್ಷಿ ಎಂದು ಹೆಗ್ಗಡೆಯವರು ಸಿದ್ಧಗಂಗಾ ಕ್ಷೇತ್ರದ ಸಾಮಾಜಿಕ ಕಾರ್ಯಗಳ ಬಗ್ಗೆ ಸಂಶೋಧನೆಯಾಗಬೇಕು ಎಂದರು. ಸಿದ್ಧಗಂಗೆಯಲ್ಲಿ ನಿತ್ಯ ಕುಂಭಮೇಳ ನಡೆಯುತ್ತಿದೆ ಎಂದ ಅವರು ಅನ್ನದಾಸೋಹ, ಜ್ಞಾನದಾಸೋಹ ಪ್ರತಿನಿತ್ಯ ಆಗುತ್ತಿರುವುದನ್ನು ಗಮನಿಸಿದರೆ ಬದುಕಿನಲ್ಲಿ ಪಾಲಿಸಬೇಕಾದ ಆದರ್ಶಗಳನ್ನು ಇಲ್ಲಿ ಕಲಿಸಲಾಗುತ್ತದೆ ಎಂದರು.

ಸಿದ್ಧಗಂಗೆಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಕೇವಲ ಡಿಗ್ರಿ ದೊರೆಯುತ್ತಿಲ್ಲವೆಂದ ಅವರು ಜೀವನ ಮೌಲ್ಯಗಳನ್ನು ತಿಳಿಹೇಳುವ ಶಿಕ್ಷಣ ಇಲ್ಲಿ ನೀಡಲಾಗುತ್ತಿದ್ದು ಬದುಕಿನ ಡಿಗ್ರಿಯನ್ನು ಕೊಡಲಾಗುತ್ತಿದೆ ಎಂದರು. ಜನತೆಗೆ ಉತ್ತಮ ಜೀವನ ನಡೆಸಲು ಮಾರ್ಗದರ್ಶನ ನೀಡಬೇಕಾದ್ದು ಪೀಠಾಧಿಪತಿಗಳ ಕೆಲಸವೆಂದ ಹೆಗ್ಗಡೆಯವರು ಈ ನಿಟ್ಟಿನಲ್ಲಿ ಉತ್ತರ ಭಾರತದಲ್ಲಿ ಸಾಧುಸಂತರು ಸಂಘಟಿತರಾಗುತ್ತಿರುವ ಬಗ್ಗೆ ತಮ್ಮ ಸಮ್ಮತಿ ಸೂಚಿಸಿದರು.



ಸಿದ್ಧಗಂಗಾ ಶ್ರೀಗಳು ಗುರುಪೀಠಗಳು ಹೇಗಿರಬೇಕು, ಅವುಗಳ ಕೆಲಸವೇನು ಎಂಬ ಬಗ್ಗೆ ಮತ್ತು ತ್ಯಾಗ, ಅಹಿಂಸೆಗಳ ಬಗ್ಗೆ ಜನತೆಗೆ ಮಾರ್ಗದರ್ಶನ ನೀಡುತ್ತಿರುವ ಮತ್ತೊಬ್ಬ ಬಾಹುಬಲಿ ಎಂದು ವರ್ಣಿಸಿದರು. ಶ್ರೀಗಳ ಮಾರ್ಗದರ್ಶನದಂತೆ ನಡೆದರೆ ಜೀವನದ ಮೌಲ್ಯಗಳನ್ನು ಅರಿತು ಉನ್ನತಿ ಸಾಧಿಸಬಹುದೆಂದರು. ಸಿದ್ಧಗಂಗೆಯಲ್ಲಿ ವಿದ್ಯಾರ್ಜನೆ ಹೊಂದಿ ಹೋದವರು ತಾವು ಉನ್ನತ ಹುದ್ದೆಗೇರಿದಾಗ ಸಿದ್ಧಗಂಗೆಯ ಅಭಿವೃದ್ಧಿಗಾಗಿ ಶ್ರಮಿಸಬೇಕು ಎಂದ ಹೆಗ್ಗಡೆಯವರು ಈ ಕೆಲಸ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾಲೇಜು, ದೇವಸ್ಥಾನ, ಹಾಸ್ಪಲ್ ಸ್ಥಾಪನೆ ಮತ್ತು ಅಭಿವೃದ್ಧಿಗಾಗಿ ವಿನಿಯೋಗಿಸುತ್ತಾರೆ ಎಂದು ಜ್ಞಾನದಾಸೋಹ ಮಾಡುತ್ತಿರುವ ಸಿದ್ಧಗಂಗಾಕ್ಷೇತ್ರದಿಂದ ಎಷ್ಟು ಜನರು ಅಕ್ಷರಸ್ಥರಾಗಿದ್ದಾರೆ ಎಂಬ ಬಗ್ಗೆ ಸಂಶೋಧನೆ ನಡೆಸಿದರೆ ದಕ್ಷಿಣಕನ್ನಡ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಸರ್ಕಾರ ನೀಡುತ್ತಿರುವ ಹಣವನ್ನೂ ಇಲ್ಲಿ ಖರ್ಚುಮಾಡಿದರೆ ಹೆಚ್ಚಿನ ಜನರನ್ನು ಸಾಕ್ಷರಸ್ಥರನ್ನಾಗಿ ಮಾಡಬಹುದು ಎಂದರು.

ಮಾನವರಲ್ಲಿ ಸ್ವಾರ್ಥಪರತೆ ಹೆಚ್ಚಾಗುತ್ತಿರುವುದರಿಂದ ಸಾಮಾಜದಲ್ಲಿ ನೈತಿಕ ಅಧಃಪತನವಾಗುತ್ತಿದೆ ಎಂದ ಹೆಗ್ಗಡೆಯವರು ಸ್ವಾರ್ಥಪರತೆ ಸಂಕುಚಿತ ಮನೋಭಾವನೆಯನ್ನು ಹೋಗಲಾಡಿಸಲು ಧಾರ್ಮಿಕ ಸಂಸ್ಥೆಗಳಿಂದ ಮಾತ್ರ ಸಾಧ್ಯವಾದ್ದರಿಂದ ಮಠಾಧಿಪತಿಗಳು ಈ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗಿ ಉತ್ತಮ ಜೀವನ ನಡೆಸುವ ಪ್ರಜ್ಞೆ ಬೆಳೆಸಬೇಕು ಎಂದರು. ಮಠಾಧಿಪತಿಗಳ ಪೀಠ ಸುಖೀ ಜೀವನ ನಡೆಸುವ ಒಂದು ಪೀಠ ಎಂಬ ಭಾವನೆ ಜನತೆಯಲ್ಲಿದೆ ಎಂದ ಹೆಗ್ಗಡೆಯವರು ಪಾಲಕಿಯಲ್ಲಿ ಗುರುಗಳನ್ನು ಒಂದು ದಿನ ಹೊತ್ತು ಮೆರವಣಿಗೆ ಮಾಡಿ ಅವರ ಮೇಲೆ ಮುನ್ನೂರರವತ್ತೈದು ದಿನಗಳೂ ತಮ್ಮ ಹೊರೆಯನ್ನು ಹಾಕುತ್ತಾರೆ ಎಂದರು. ಆದ್ದರಿಂದ ಗುರುಪೀಠ ಜನರಿಂದ ಹೊರಿಸಿಕೊಳ್ಳುವ ಪೀಠವಲ್ಲ ಜನರನ್ನು ಹೊರುವ ಪೀಠವೆಂದರು.

ಸಿದ್ಧಗಂಗಾಶ್ರೀ ಪರಮ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾ ಸ್ವಾಮಿಗಳವರು ಆಶೀರ್ವಚನ ನೀಡಿ ಮಾತನಾಡುತ್ತ ತಮ್ಮ ಸಾಧನೆಯ ಬಗ್ಗೆ ತಮ್ಮ ಅಂತರಂಗ ಪ್ರಶ್ನಿಸುತ್ತಿದೆ ಎಂದ ಅವರು ಅಂತರಂಗದ ಪ್ರಶ್ನೆಗೆ ಉತ್ತರಿಸುವಶಕ್ತಿ-ಯನ್ನು ತಾವು ಪಡೆದಿಲ್ಲವೆಂದರು.

ಸಿದ್ಧಗಂಗಾ ಮಠದ ಬೆಳವಣಿಗೆ ಕೇವಲ ತಮ್ಮಿಂದ ಆಗಿಲ್ಲವೆಂದ ಅವರು ಈ ಬೆಳವಣಿಗೆಯ ಹಿಂದೆ ಹಲವರ ಸೇವೆ ಇದೆಯೆಂದರು.

ಇಂದಿನ ಸಾಮಾಜಿಕ ವ್ಯವಸ್ಥೆ ಅವನತಿಯತ್ತ ಹೋಗಲು ಸಮಾಜದ ಎಲ್ಲರೂ ಹೊಣೆಗಾರರು ಎಂದ ಪೂಜ್ಯರು ಇದರಲ್ಲಿ ಹೆಚ್ಚಿನ ಪಾತ್ರ ರಾಜಕಾರಣಿಗಳದು

ಎಂದರು. ಉತ್ತಮ ಜೀವನದ ಕಲೆಯ ಬಗ್ಗೆ ಮಾರ್ಗದರ್ಶನ ನೀಡಬೇಕಾದ್ದು ಧರ್ಮದ ಮುಖ್ಯ ಉದ್ದೇಶವಾಗಿರಬೇಕು ಎಂದ ಅವರು ಆದರೆ ಗುರು ಪೀಠಗಳು ಎಷ್ಟರಮಟ್ಟಿಗೆ ಜನತೆಗೆ ಜೀವನ ಮೌಲ್ಯಗಳ ಬಗ್ಗೆ ಮತ್ತು ಉತ್ತಮ ಜೀವನ ನಡೆಸುವುದರ ಬಗ್ಗೆ ಮಾರ್ಗದರ್ಶನ ಮಾಡಿವೆ ಎಂದು ಯೋಚಿಸಿದಾಗ ಧಾರ್ಮಿಕ ಸಂಸ್ಥೆಗಳು ತಲೆ ತಗ್ಗಿಸಬೇಕಾಗುತ್ತದೆ ಎಂದರು. ಸಮಾಜವನ್ನು ತಿದ್ದುವ ಕೆಲಸ ಮಠಾಧೀಶರಿಂದ ಆಗಿಲ್ಲವೆಂದು ವಿಷಾದಿಸಿದರು. ಮುಂದುವರಿದು ಮಠಾಧಿಪತಿಗಳು ರಾಜಕೀಯ ಪ್ರವೇಶ ಮಾಡುವುದನ್ನು ವಿರೋಧಿಸಿದ ಪೂಜ್ಯಶ್ರೀಗಳು ಮಠಾಧಿಪತಿ ಗಳು ಮಾರ್ಗದರ್ಶಕರಾಗಿರಬೇಕೆ ಹೊರತು ತಾವೇ ನೇರ ರಾಜಕೀಯ ಪ್ರವೇಶ ಮಾಡಬಾರದು ಎಂದರು. ರಾಜಕಾರಣ ಸಮಾಜ ಮತ್ತು ಆರ್ಥಿಕ ವ್ಯವಸ್ಥೆ ಬದ ಲಾವಣೆಯಾಗಬೇಕಾದರೆ ಅದು ಆಧ್ಯಾತ್ಮಿಕ ಹಿನ್ನಲೆಯಿಂದ ಮಾತ್ರಸಾಧ್ಯವೆಂದರು ಮಾತೃ ವಾತ್ಸಲ್ಯ. ಶಿಕ್ಷಕನ ಶಿಕ್ಷಕ ವೃತ್ತಿ ಚಾರಿತ್ರ್ಯ, ಪಾಂಡಿತ್ಯ ಇವುಗಳು ಮಾತ್ರ ಜಗತ್ತನ್ನು ವಿನಾಶದಿಂದ ಪಾರುಮಾಡಬಲ್ಲವು ಎಂದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಡಂಬಳ ಗದಗದ ಶ್ರೀ ತೋಂಟದಾರ್ಯ ಸಂಸ್ಥಾನ ಮಠದ ಪೂಜ್ಯರಾದ ಜಗದ್ಗುರು ಶ್ರೀ ತೋಂಟದಾರ್ಯ ಸಿದ್ದಲಿಂಗ ಮಹಾಸ್ವಾಮಿಗಳವರು ಮಾತನಾಡುತ್ತ ಹಿಮಾಲಯಕ್ಕೆ ಹೋಲಿಕೆ ಹಿಮಾಲಯವೆ ಎಂಬಂತೆ ಶಿವಕುಮಾರಸ್ವಾಮಿಗಳಿಗೆ ಹೋಲಿಕೆ ಶಿವಕುಮಾರ ಸ್ವಾಮಿಗಳೇ ಎಂದರು. ಮುಂದುವರಿದು ಹರಿಹರಕವಿ ಬಸವರಾಜ ದೇವರ ರಗಳೆಯಲ್ಲಿ ಬಸವಣ್ಣನವರಬಗ್ಗೆ ಹೇಳಿರುವ ಮಾತುಗಳಲ್ಲಿ ಶಿವಕುಮಾರಸ್ವಾಮಿಗಳಿಗೆ ಅನ್ವರ್ಥಕವಾಗುತ್ತವೆ ಎಂದರು. ಸನ್ಮಾನಿತರ ಬಗ್ಗೆ ಪ್ರಶಂಸೆ ಮಾತುಗಳನ್ನಾಡಿದರು.

ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಆರೋಗ್ಯ ಸಚಿವೆ ಶ್ರೀ ಮತಿ ನಾಗರತ್ನಮ್ಮನವರು ಶ್ರೀ ಮಠದ ಪೂಜ್ಯ ಶ್ರೀ ಉದ್ದಾನಸ್ವಾಮಿಗಳು ಕಾಮಧೇನುವಾ ದರೆ ಪೂಜ್ಯಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಕಲ್ಪವೃಕ್ಷವಾಗಿದ್ದಾರೆ ಎಂದರು ಮತ್ತೊಬ್ಬ ಮುಖ್ಯ ಅತಿಥಿಗಳಾದ ಸಣ್ಣನೀರಾವರಿ ಇಲಾಖೆ ರಾಜ್ಯ ಸಚಿವರಾದ ಶ್ರೀ ಕೆ. ಎಸ್. ಮಲ್ಲಿಕಾರ್ಜುನ ಪ್ರಸನ್ನರವರು ಬಸವಣ್ಣನವರ ಜನ್ಮದಿನ ಆಚರಿಸುವಂತೆ ಶಿವಕುಮಾರಸ್ವಾಮೀಜಿಯವರ ಜನ್ಮದಿನವನ್ನೂ ಆಚರಿಸುವಂತಾಗಬೇಕು ಎಂದು ಆಶಿಸಿದರು.

ಸಿದ್ಧಗಂಗಾ ಶ್ರೀಗಳ 84 ನೆ ಜನ್ಮದಿನೋತ್ಸವದ ಸುಸಂದರ್ಭದಲ್ಲಿ ವಿವಿಧ ಕ್ಷೇತ್ರ ಗಳಲ್ಲಿ ಸೇವೆ ಸಲ್ಲಿಸಿ ಗಣ್ಯರಾದ ಪದ್ಮಭೂಷಣ ಡಾ|| ಎಂ. ಸಿ. ಮೋದಿ ಡಾ|| ದೇ. ಜವರೇಗೌಡ, ಪದ್ಮಶ್ರೀ ಆರ್. ಎಂ. ಬಿ. ಆರಾಧ್ಯ, ಶ್ರೀ ಹೆಚ್. ಎಂ. ಗಂಗಾಧರಯ್ಯ ಶ್ರೀಮತಿ ಕಸ್ತೂರಿ ಶಂಕರ್ ಅವರುಗಳಿಗೆ ಶಾಲು ಹೊದಿಸಿ, ನೆನಪಿನ ಉಡುಗರೆಗಳನ್ನೂ ಕೊಟ್ಟು ಪ ಪೂ ಪೂಜ್ಯ ಶ್ರೀ ಶ್ರೀ ಗಳು ಆಶೀರ್ವದಿಸಿದರು,



ಕಾರ್ಯಕ್ರಮವನ್ನು ಜಾನಪದತಜ್ಞ, ಶ್ರೀ ಗೊ. ರು. ಚೆನ್ನಬಸಪ್ಪನವರು ನಿರೂಪಿ- ಸಿದರು. ಶ್ರೀ ಹೆಚ್. ವಿ. ವೀರಭದ್ರಯ್ಯನವರು ಶರಣು ಸಮರ್ಪಣೆ ಮಾಡಿದರು.

ಇದೇ ಸಂದರ್ಭದಲ್ಲಿ ಬಸವತತ್ವ ಗೋಷ್ಠಿಯನ್ನು ಏರ್ಪಡಿಸಲಾಗಿತ್ತು. ಬೆಂಗ ಳೂರು ಬೇಲಿಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಶಿವರುದ್ರಸ್ವಾಮಿಗಳು ಅಧ್ಯಕ್ಷತೆ ವಹಿಸಿದ್ದರು. ಡಾ|| ದೇ. ಜವರೇಗೌಡರು ಉಪನ್ಯಾಸಮಾಡುತ್ತ ಬಸವಣ್ಣನವ ರಂತಹ ಸಮಾಜಸುಧಾರಕ ಜಗತ್ತಿನಲ್ಲಿ ಬರಲೇಇಲ್ಲ. ಅವನ ಮಾರ್ಗಾನುಯಾಯಿಗಳು ಅವರ ತತ್ವಗಳನ್ನು ಆಚರಿಸುವ ನೈಜನಿಷ್ಠೆ ತೋರಲಿಲ್ಲ. ಮಹಾ ಮಾನತಾವಾದಿ ಯಾದ ಬಸವಣ್ಣನವರ ಧರ್ಮ ಮೌಢ್ಯಗಳಿಂದ ಮುಕ್ತವಾದ ನಿರ್ಮಲ ಧರ್ಮ ವೆಂದರು. ಮತ್ತೊಮ್ಮೆ ಅತಿಥಿಗಳಾದ ಶ್ರೀ ಜಿ. ಎಸ್. ಸಿದ್ಧಲಿಂಗಯ್ಯನವರು ಮಾತ ನಾಡುತ್ತ ಬಸವಣ್ಣನವರ ವಚನಗಳು ಜಗತ್ತಿನ ಇತರ ಭಾಷೆಗಳಿಗೆ ಅನುವಾದವಾಗ ಬೇಕಾದ ಅಗತ್ಯವನ್ನು ಒತ್ತಿ ಹೇಳುತ್ತ ಸಿದ್ಧಗಂಗೆಯ ಸ್ವಾಮಿಗಳು ನಾಟಕ ಮಾಧ್ಯಮ ದ ಮೂಲಕ ಗ್ರಾಮಾಂತರ ಬಸವ ಜಯಂತಿ ನಡೆಸುತ್ತಿರುವುದನ್ನು ವಿನೂತನ ಪ್ರಯೋಗವೆಂದು ಮೆಚ್ಚಿಗೆಯ ನುಡಿಗಳನ್ನಾಡಿದರು.

ಬೇಲಿಮಠದ ಶ್ರೀಗಳವರು ಅಧ್ಯಕ್ಷಭಾಷಣ ಮಾಡುತ್ತಾ ಹುಟ್ಟು ಹೋರಾಟ ಗಾರನಾದ ಬಸವಣ್ಣ ಅಮೂಲ್ಯ ಚಿಂತಕ, ವಿಚಾರದ ಮಹಾಗಣಿ ಸಂಪ್ರದಾಯದ ಸಂಕೋಲೆಗಳನ್ನು ಮುರಿದ ಮುತ್ಸದ್ದಿ, ವೈದಿಕರ ಹಿಡಿತದಿಂದ ಸಮಾಜವನ್ನು ವಿಮೋಚನೆಗೊಳಿಸಿದ ಮಹಾತ್ಮ, ಇಷ್ಟಲಿಂಗದ ಮಹಾಮಾಧ್ಯಮದ ಮೂಲಕ ಮನುಕುಲವನ್ನು ಬೆಸೆದ ಮಹಾಂತ ಎನ್ನುತ್ತ ಸಿದ್ಧಗಂಗೆಯ 'ಅಪ್ಪ'ಗಳು ಬಸವತತ್ವ ಪ್ರಸಾರದಲ್ಲಿ ಅಂದೋಳನವನ್ನೇ ನಡೆಸಿರುವ ಮೇರು ಸದೃಶರು ಎಂಬುದಾಗಿ ನುಡಿದರು.

## ಶ್ರದ್ಧಾಂಜಲಿ

ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಮಾಜಿ ಪ್ರಧಾನಿ ರಾಜೀವ್ ಗಾಂಧಿಯವರ ಕಗ್ಗೊಲೆ ಅಮಾನುಷ ಕೃತ್ಯವಾಗಿದೆ. ಭಾರತದ ಹಿರಿಮೆ ಸಂಸ್ಕೃತಿ ಮತ್ತು ಆದರ್ಶಮೌಲ್ಯಗಳಿಗೆ ಈ ಘಟನೆಯಿಂದ ತೀವ್ರ ಆಘಾತವಾಗಿದೆ. ಇಂಥಹ ಹೇಡಿತನದ ಮಹಾದುರಂತವನ್ನು ಎಲ್ಲಾ ಭಾರತೀಯರು ಖಂಡಿಸುತ್ತಾರೆ.

ಅವರ ಅಕಾಲ ಮೃತ್ಯುವಿನಿಂದ ರಾಷ್ಟ್ರಕ್ಕೆ ತುಂಬಲಾಗದ ಹಾನಿ ಉಂಟಾಗಿದೆ.

ದಯಾಮಯನಾದ ಪರಮಾತ್ಮ ಅವರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು "ಸಿದ್ಧಗಂಗಾ" ಹಾರೈಸುತ್ತದೆ.

# ಗ್ರಾಮಾಂತರ ಬಸವ ಜಯಂತಿ

ಹೆಚ್. ವಿ. ವೀರಭದ್ರಯ್ಯ

ಆತ್ಮೀಯ ಶರಣಬಂಧು,

ಹೊಸಕೋಟೆಯಿಂದ ಬಸವಯಾತ್ರೆಯ ಪಯಣ ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕು ಕೊಳ್ಳಂಗಿ ಗ್ರಾಮದತ್ತ ನಡೆಯಿತು ದ್ರಾಕ್ಷಿತೋಟಗಳ ಸುಂದರ ನಾಡಿನಿಂದ ಕಾಫಿ ಏಲಕ್ಕಿಗಳ ಮಲೆನಾಡಿಗೆ ದಿನಾಂಕ 2-4-91 ರಂದು ಕೊಳ್ಳಂಗಿಗೆ ಪರಮಪೂಜ್ಯರು ಆಗಮಿಸಿದಾಗ ಅದ್ಭುತ ಸ್ವಾಗತ ಸಂಭ್ರಮ. ನೂರಾರು ಕುಂಭ ಕಲಶಗಳು - ಸುತ್ತ ಹತ್ತಾರು ಹಳ್ಳಿಗಳ ಮುಗ್ಧ ಬಂಧು ಭಗಿನಿಯರ ಜನಸ್ತೋಮ. ಸಮಾರಂಭಕ್ಕೆ ಕಳೆತಂದುಕೊಟ್ಟ ಹರಗುರುಚರಮೂರ್ತಿಗಳ ಅಧಿಕಸಂಖ್ಯೆ. ಮನೆ ಮನೆಯಮುಂದೆ ಬಸವಣ್ಣನವರ ಭಾವಚಿತ್ರ; ಅದಕ್ಕೆ ಪುಷ್ಪಾಲಂಕಾರ, ದೀಪಾಲಂಕಾರ, ಗಂಧ ಕರ್ಪೂರಗಳ ಅರ್ಪಣೆ.

ಸಮಾರಂಭ ನಿಯಮಿತವೇಳೆಗೆ ಪ್ರಾರಂಭವಾದಾಗ ಜನಸಾಗರ ಅಲೆಅಲೆಯಾಗಿ ಚಲಿಸುತ್ತಾ ಬಂದು ಸಹಕರಿಸಿತು. ಮಾಯಗೌಡನಹಳ್ಳಿ ಪೂಜ್ಯ ಶ್ರೀ ಶ್ರೀ ಚಂದ್ರಶೇಖರಸ್ವಾಮಿಗಳು ಸಭೆಯನ್ನು ಉದ್ಘಾಟಿಸಿ ಮಾತನಾಡುತ್ತಾ ಬಸವಣ್ಣನವರ ತತ್ತ್ವ ಪ್ರಸಾರದಲ್ಲಿ ಸಿದ್ಧಗಂಗೆಯ ಸ್ವಾಮಿಗಳು ಅದ್ಭುತ ಕ್ರಾಂತಿಯನ್ನೇ ನಡೆಸಿದ್ದಾರೆ. ಜೀವನಕ್ಕೆ ಚೈತನ್ಯಗಂಗೆಯನ್ನೇ ಹರಿಸಿದ್ದಾರೆ. ಗ್ರಾಮೀಣ ಬಂಧುಗಳ ಹೃದಯಕ್ಕೆ ಪವಿತ್ರ ಮೌಲ್ಯಗಳ ಬೆಳಕನ್ನು ನೀಡುತ್ತಿದ್ದಾರೆ ಎಂದರು. ಪೂಜ್ಯರಾದ ಬೇಬಿಬೆಟ್ಟದ ಶ್ರೀಗಳು, ಕಲ್ಮಠದ ಶ್ರೀಗಳು ಹಾಗೂ ಶಾಸಕರಾದ ಶ್ರೀ ರಾಮಸ್ವಾಮಿಗಳು ಉಪನ್ಯಾಸ ನೀಡಿ ಸಿದ್ಧಗಂಗಾ ಶ್ರೀ ಗಳ ಮತ್ತು ಬಸವಾದಿ ಪ್ರಮಥರ ಜೀವನ ಸಂದೇಶವನ್ನು ಜನತೆಗೆ ಪರಿಚಯಿಸಿದರು. ಮಧ್ಯಾಹ್ನದ ಸಭೆಯಲ್ಲಿ ಮಾತನಾಡಿದ ಶ್ರೀ ಬಿ. ವೀರಭದ್ರಯ್ಯನವರು ಬಸವಣ್ಣ ಮನುಕುಲದ ಮಂಗಳ ಮಾಂಗಲ್ಯ, ಕ್ರಾಂತಿದೀಪ, ಅನುಭಾವದ ಹರಿಕಾರ, ಮಾನವತಾ ಮಹಾಮೇರು ಅಂಥ ಮಹಾನುಭಾವಿಯ ಸಂದೇಶವನ್ನು ಸಾರುತ್ತ ಹೊರಟಿರುವ ಸಿದ್ಧಗಂಗಾ ಶ್ರೀ ಗಳವರು ಮಠಮಾನ್ಯಗಳಿಗೆಲ್ಲ ಆದರ್ಶವಾಗಿದ್ದಾರೆ ಎಂದರು. ಶ್ರೀ ಹೆಚ್. ವಿ. ವೀರಭದ್ರಯ್ಯನವರು ಉಪನ್ಯಾಸ ನೀಡಿದರು. ಮಳೆಯ ಪ್ರಯುಕ್ತ ಅಂದು ನಾಟಕ ನಡೆಯಲಿಲ್ಲವಾಗಿ ಗ್ರಾಮಬಂಧುಗಳ ಬಿನ್ನಹದ ಮೇರೆಗೆ ಮತ್ತೆ 13. 4.91 ರಂದು ನಾಟಕ ನಡೆದಾಗ ಸುಮಾರು ಮೂವತ್ತೈದು ಸಹಸ್ರ ಜನ ಬಸವದರ್ಶನ ಮಾಡಿಕೊಂಡು ತೃಪ್ತರಾದರು.

ದೊಡ್ಡಗಂಗವಾಡಿಯ ಹಿರಿಯರು ಹನ್ನೆರಡನೆ ಶತಮಾನದಲ್ಲಿ ಬಸವಣ್ಣನವರು ಮಾಗಡಿ ತಾಲ್ಲೂಕು ಕಲ್ಯಕ್ಕೆ ಬಂದಿದ್ದಾಗ ತಮ್ಮೂರಿಗೆ ಆಹ್ವಾನಿಸಿ ಬಿನ್ನಹ ಮಾಡಿದ್ದರಂತೆ. ಅಷ್ಟರಲ್ಲಿ ಕಲ್ಯಾಣದಲ್ಲಿ ಕ್ರಾಂತಿಯುಂಟಾಗಿ ಬಸವಣ್ಣನವರು ದೊಡ್ಡಗಂಗ



ವಾಡಿಗೆ ಬರಲಾಗದೆ ಹಿಂತಿರುಗಿದರಂತೆ. ಆದಾದ ಎಂಟುನೂರಾಐವತ್ತು ವರ್ಷಗಳ ನಂತರ ಪರಮ ಪೂಜ್ಯ ಸಿದ್ಧಗಂಗಾ ಶ್ರೀ ಗಳಾದ ಶ್ರೀ ಶ್ರೀ ಡಾ|| ಶಿವಕುಮಾರ ಸ್ವಾಮಿಗಳ ರೂಪದಲ್ಲಿ ದೊಡ್ಡಗಂಗವಾಡಿಗೆ ಬಂದಿದ್ದಾರೆಂದು ಭಕ್ತಿನುಡಿಗಳನ್ನಾಡಿದರು ದಿನಾಂಕ 5. 4. 91 ರಂದು ಬಸವಜಯಂತಿ ಸಂದರ್ಭದಲ್ಲಿ.

ಸಮಾರಂಭದಲ್ಲಿ ಉಪನ್ಯಾಸಮಾಡಿದ ಬೇವೂರು ಮಠದ ಪೂಜ್ಯ ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳು ಬಸವಣ್ಣ ಜೀವನದ್ರಷ್ಟಾರ, ಕ್ರಾಂತಿಕಲಾವಿದ, ದಯೆಯ ಪೂರ್ಣಕುಂಭ, ದೀನದಲಿತರ ಮಂಗಳ ಧ್ವನಿ ಎಂದು ನುಡಿದರು. ಮತ್ತೋರ್ವ ಶ್ರೀ ಗಳಾದ ಬೆಟ್ಟಳ್ಳಿ ಮಠದ ಪೂಜ್ಯ ಶ್ರೀ ನೀಲಕಂಠಶಿವಾಚಾರ್ಯ ಸ್ವಾಮಿಗಳು ಭಾವೈಕ್ಯತೆಯ ಪವಿತ್ರರೂವಾರಿ ಬಸವಣ್ಣ, ಸದ್ಗುಣಗಳನ್ನೇ ಬಿತ್ತಿ ಬೆಳೆದ ಕೂಡಲಸಂಗನ ಆರಾಧ್ಯ ಭಕ್ತ, ಲೋಕ ಪೂಜ್ಯ ಬಸವಣ್ಣನವರ ದಿವ್ಯ ಜೀವನ ಸಂದೇಶದ ಹರಿಕಾರರಾಗಿ ಸಿದ್ಧಗಂಗೆಯ ಪೂಜ್ಯರು ಹಗಲಿರುಳು ಶ್ರಮಿಸುತ್ತಿರುವುದನ್ನು ಸಮಾಜ ಅರ್ಥಮಾಡಿಕೊಂಡು ನಡೆಯಬೇಕೆಂದರು. ಇನ್ನೋರ್ವ ಶ್ರೀ ಸ್ವಾಮಿಗಳಾದ ಅಂಕನಹಳ್ಳಿ ಮಠದ ಪೂಜ್ಯ ಶ್ರೀ ಸಿದ್ಧಲಿಂಗ ಶಿವಾಚಾರ್ಯಸ್ವಾಮಿಗಳು ಮಾತನಾಡುತ್ತ ಸಿದ್ಧಗಂಗೆಯ ಪೂಜ್ಯ ಶ್ರೀ ಶಿವಕುಮಾರ ಸ್ವಾಮಿಗಳು ಪ್ರತ್ಯಕ್ಷದೇವರಾಗಿದ್ದಾರೆ ಅವರು ತೋರಿದ ದಾರಿಯಲ್ಲಿ ನಡೆಯುವುದಷ್ಟೆ ನಮ್ಮ ಕೆಲಸ ಎಂದು ಭಕ್ತಿಗೌರವಗಳನ್ನು ವ್ಯಕ್ತಮಾಡಿದರು.

ವಿದ್ವಾನ್ ಶ್ರೀ ಜಿ. ವಿ. ಶಿವಸ್ವಾಮಿಯವರು ಉಪನ್ಯಾಸ ಮಾಡುತ್ತ ಬಸವಣ್ಣನವರ ಸಾಹಿತ್ಯ ವ್ಯವಸಾಯದ ಪರಿಚಯಮಾಡಿಕೊಟ್ಟರು. ಜನಪದರು ಬಸವಣ್ಣನನ್ನು ಎದೆಗಪ್ಪಿಕೊಂಡು ಹೃದಯ ತುಂಬಿ ಹಾಡಿದ ರೀತಿಯನ್ನು ಶ್ರೀ ಹೆಚ್. ವಿ. ವೀರಭದ್ರಯ್ಯನವರು ಪರಿಚಯಿಸಿದರು.

ಪರಮ ಪೂಜ್ಯ ಶ್ರೀ ಶ್ರೀ ಗಳು ಅಧ್ಯಕ್ಷಪೀಠದಿಂದ ಆಶೀರ್ವಚನ ನೀಡುತ್ತ ಬಸವಣ್ಣನಂಥ ಮಂಗಳ ಮೂರ್ತಿಯನ್ನು ಜಗತ್ತು ಕಂಡದ್ದೇ ಒಂದು ದೊಡ್ಡ ವಿಸ್ಮಯ ಮಾನವೀಯ ಮಹಾಶಿಲ್ಪವಾದ ಬಸವಣ್ಣ ದೀನರಿಗಾಗಿ ದಲಿತರಿಗಾಗಿ ಹೋರಾಟ ಮಾಡಿದರೀತಿ ಸಾರ್ವಕಾಲಿಕ ತೋರುಗಂಭ, ಜೀವನವನ್ನು ಕಲೆಯನ್ನಾಗಿ ರೂಪಿಸಿದ ರೂವಾರಿ ಎಂದು ಆಶೀರ್ವಚನ ನೀಡಿದರು.

ನಾಟಕ ನಡೆವ ಮುನ್ನ ಮಳೆಕಾಣಿಸಿಕೊಂಡು ಬಸವಣ್ಣನಿಗೆ ಶರಣು ಮಾಡಿ ಹಿಂತಿರುಗಿತು. ಬೆಳಗಿನತನಕ ನಾಟಕ ನೋಡಿದ ಗಂಗವಾಡಿಯ ಬಂಧುಗಳು ತೃಪ್ತಿಯ ಮೃದುಮಾತುಗಳಿಂದ ಕಲಾವಿದರಿಗೆ ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತಿದ್ದರು.

ಆಧುನಿಕ "ಮನಸ್ಸು" ತುಂಬ ಸಂಕೀರ್ಣವಾದುದು. ಲೋಕ ವ್ಯವಹಾರದ "ಸೀಗೆಮುಳೆ" ಯಲ್ಲಿ ಅದು ಮಗ್ನವಾಗುವುದೇ ಹೆಚ್ಚು. ಅದರಲ್ಲೂ ಬೆಂಗಳೂರಿನಂಥ ಜಗತ್ತಿನ ಹದಿಮೂರನೆ ಬೃಹತ್‌ನಗರವಾಸಿಯಾದ 'ಮನಸ್ಸು' ಗಳಿಗೆ ಬಸವಣ್ಣನವರ ಸರಳ ಜೀವನದ ವಿಧಿವಿಧಾನಗಳು ರುಚಿಸುವುದು ದುಸ್ತರ. ಪ್ರವಾಹಕ್ಕೆ ಎದುರು ಈಜುವ ಸಾಹಸ. ಆದರೆ ಪರಮ ಪೂಜ್ಯರ ಒಳದೃಷ್ಟಿಗೆ ಕಾಣುವುದೇ

ಬೇರೆ. ಸಂತೆಯ ಮಧ್ಯದಲ್ಲೂ ಶಿವಪೂಜೆ ಶಿವಯೋಗ ನಡೆಯಬೇಕೆಂಬುದೇ ಶರಣ ಸಿದ್ಧಾಂತವೆಂಬುದನ್ನ ಬಲ್ಲವರು. ಧರ್ಮ, ಮೋಕ್ಷ ಮುಂತಾದುವೆಲ್ಲ ಜೀವನ ವಿಮುಖವಾಗಬಾರದು. ಜೀವನದಿಂದಲೇ ಎದ್ದು ಬರಬೇಕು ಜೀವನವನ್ನು ಹದಗೊಳಿಸಬೇಕು ಎಂಬ ಪರಿಪೂರ್ಣ ನೋಟ. ಹಳ್ಳಿ - ಹಳ್ಳಿಗಳ ಭಿನ್ನ ಭೇದವಿಲ್ಲ ಬಸವ ತತ್ತ್ವ ಪ್ರಸಾರಕ್ಕೆ ಎಂಬಂತೆ ಬೆಂಗಳೂರು ದಕ್ಷಿಣ ದಾಸನಪುರ ಹೋಬಳಿ ಮಾದನಾಯ್ಕನಹಳ್ಳಿಯಲ್ಲಿ ದಿನಾಂಕ 7-4-91 ರಂದು ಬಸವಜಯಂತಿ. ಅತ್ಯದ್ಭುತವಾದ ವ್ಯವಸ್ಥೆ ಭಕ್ತಿಉತ್ಸಾಹಗಳ ಪ್ರತಿರೂಪ. ರಾಷ್ಟ್ರೀಯ ಹೆದ್ದಾರಿ ನಾಲ್ಕರ ಪಕ್ಕದಲ್ಲಿ ವ್ಯವಸ್ಥೆಗೊಂಡ ಸಭಾಂಗಣ ಕಣ್ಣೆದುರಿಗೆ ಸಾಲ ಸಾಲು ವಾಹನಗಳ ಸಾಗಾಟ ಹಲವು ಹನ್ನೊಂದು ವ್ಯಾಪಾರಗಳ ಮನೋಧರ್ಮಿಗಳ ಮಧ್ಯೆ ಕೇಳಿಬಂದ ವಚನದಲ್ಲಿ ನಾಮಾಮೃತ ತುಂಬಿ' ಎಂಬ ಅಣ್ಣನವರ ವಚನ. 'ಹೂವ ಚೆಲ್ಲಿರೇ ಸ್ವಾಮಿ ಬರುವ ಹಾದಿಗೆ ಹೂವ ಚೆಲ್ಲಿರೆ' ಎಂಬ ಸೋದರಿ ಜಗದಾಂಗ ಅವರ ಮಧುರಕಂಠದ ಭಕ್ತಿಗೀತೆ. ಸಿದ್ಧಗಂಗಾಮಠದ ಕಿರಿಯ ಸ್ವಾಮಿಗಳಾದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳಿಂದ ಸಮಾರಂಭದ ಉದ್ಘಾಟನೆ, ಬಂಡೇಮಠದ ಪೂಜ್ಯ ಶ್ರೀ ಶಿವರುದ್ರ ಸ್ವಾಮಿಗಳಿಂದ ಆಶೀರ್ವಚನ, ನೆಲಮಂಗಲದ ಪೂಜ್ಯ ಶ್ರೀಗಳಿಂದ ಆಶೀರ್ವಚನ, ಶ್ರೀ ಹೆಚ್. ವಿ. ವೀರಭದ್ರಯ್ಯನವರಿಂದ ಉಪನ್ಯಾಸಗಳಾಗಿ ಬಸವ ಸಂದೇಶದ ಹಲವು ಮುಖಗಳ ಪರಿಚಯು ಸಭೆಗಾಯಿತು. ಮಧ್ಯಾಹ್ನದ ಸಭೆಯಲ್ಲಿ ಮಾತನಾಡಿದ ಬೇಲಿ ಮಠದ ಪೂಜ್ಯ ಶ್ರೀ ಶಿವರುದ್ರಸ್ವಾಮಿಗಳು ಬಸವಣ್ಣ ಮಂತ್ರ ಪುರುಷ' ಆತ ಬಿತ್ತಿದ್ದು ಕಾಯಕ ದಾಸೋಹಗಳನ್ನು, ಗುರುಲಿಂಗ ಜಂಗಮದಂಥ ಫಲವನ್ನು ಎನ್ನುತ್ತ 'ಉತ್ತಿ ಬಿತ್ತುವ ಮಂತ್ರ ಬಿತ್ತಿ ಬೆಳೆಯು ಮಂತ್ರ' ಬಸವಣ್ಣ ಬೋಧಿಸಿದ್ದು ಅದನ್ನೆ ಸಿದ್ಧಗಂಗಾ ಪೂಜ್ಯಪಾದರು ಕಣ್ಣೆದುರು ಆಚರಿಸಿ ತೋರಿಸುತ್ತ ನಡೆದಿದ್ದಾರೆ ಎಂದು ಉಪನ್ಯಾಸಮಾಡಿದರು.

ಬಸವಣ್ಣ ಬಡವರ ಬಂಧು, ಅಸ್ಪೃಶ್ಯರ ಸೂರ್ಯ, ಸ್ತ್ರೀಯರ ಭಾಗ್ಯ, ದುಃಖಿಗಳ ಭರವಸೆ, ವರ್ಣಾಶ್ರಮ ಧರ್ಮಿಗಳ ವಿರೋಧಿ, ಮಾನವ ಕುಲದ ಮಂಗಳದೀಪ ಎಂದು ಪರಮ ಪೂಜ್ಯ ಶ್ರೀ ಶ್ರೀ ಗಳು ಆಶೀರ್ವಚನ ನೀಡಿದರು.

ಸಮಾರಂಭದಲ್ಲಿ ಪುಟ್ಟ ಮಕ್ಕಳು ಕುಮಾರಿ ಶಶಿಕಲಾ, ಕುಮಾರಿ ಸುಧಾ ಬಸವಣ್ಣನವರನ್ನು ಕುರಿತು ಮಾತನಾಡಿದ್ದು ಸಭಿಕರ ಮೆಚ್ಚುಗೆಯನ್ನು ಗಳಿಸಿತು.

ರಾತ್ರಿ ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶಿತವಾದಾಗ ಬಾಂಬೆ ಬೆಂಗಳೂರು ಮಧ್ಯೆ ಸಂಚರಿಸುವ ಲಾರಿಗಳ ಡ್ರೈವರ್‌ಗಳು ಸಿಖ್ ಧರ್ಮಿಗಳು ನಿಂತು ನೋಡುವಂತೆ ಅಭಿನಯಿಸಲ್ಪಟ್ಟಿತು. ಭಾಷೆ ಅಡ್ಡಿಯಾಗಲಿಲ್ಲ. ಸಿಖ್ ಬಂಧುಗಳಿಗೆ 'ಬಹೂತ್ ಅಚ್ಚಾ ಹೈ' ಎಂದು ಮಾತಾಡಿಕೊಂಡು ಬಿಚ್ಚಿಹೋಗುತ್ತಿದ್ದ ರುಮಾಲನು ಬಿಗಿದು ಕಟ್ಟಿಕೊಳ್ಳುತ್ತಿರುವಾಗ ಪೂಜ್ಯ ಸ್ವಾಮಿಗಳ ಕಾರು ಬಂದುದನ್ನು ಕಂಡು ಸರಿದು ದಾರಿಬಿಟ್ಟರ.

ಸಿದ್ಧಗಂಗಾ ಬರೆಯುತ್ತೇನೆ.





ಡಾ॥ ದೇ. ಜವರೇಗೌಡರು ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ಸಲ್ಲಿಸಿದ ಸೇವೆ ಸ್ಮರಣೀಯ. ಬಸವಣ್ಣನವರು ಜಗತ್ತಿನಲ್ಲಿ "ಸಮಗ್ರ ಕ್ರಾಂತಿಯ ಮೂಲ ಪುರುಷ" ಎಂಬ ಇವರ ಅಮೂಲ್ಯ ಗ್ರಂಥ ಮೇರು ಕೃತಿಯಾಗಿದೆ.



ವಿದ್ಯಾಪ್ರಸಾರದಲ್ಲಿ ಅದ್ಭುತ ಸೇವೆ ಸಲ್ಲಿಸುತ್ತಿರುವ ಶ್ರೀ ಹೆಚ್. ಎಂ. ಗಂಗಾಧರಯ್ಯನವರು. ಸಿದ್ಧಗಂಗಾ ಪೂಜ್ಯ ಶ್ರೀ ಶ್ರೀ ಗಳವರ ಆಶೀರ್ವಾದದಿಂದ ತಮ್ಮ ಸಿದ್ಧಾರ್ಥ ವಿದ್ಯಾಸಂಸ್ಥೆ ಅಭಿವೃದ್ಧಿ ಪಥದಲ್ಲಿ ಮುನ್ನಡೆಯುತ್ತಿದೆ ಎಂದು ಹೆಮ್ಮೆಯಿಂದ ಸ್ಮರಿಸುತ್ತಾರೆ.

"SIDDAGANGA" MONTHLY Reg. No. KRNQ-9



# ಆಮಂತ್ರಣ

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ತ್ರಿವಿಧದಾಸೋಹ ಮೂರ್ತಿಗಳಾದ
ಶಿವಯೋಗಿ ಪರಮಪೂಜ್ಯ

## ಡಾ|| ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ

## ವಜ್ರಮಹೋತ್ಸವ ಆಚರಣೆಯ ಸಂಬಂಧವಾಗಿ

**ರಾಜ್ಯ ಮಟ್ಟದ ಭಕ್ತಾದಿಗಳ ಸಭೆಯನ್ನು ಕರೆಯಲಾಗಿದೆ.**

---

ದಿನಾಂಕ : 9 ಜೂನ್ 1991 ಭಾನುವಾರ ಬೆಳಿಗ್ಗೆ 10 ಘಂಟೆ.

ಸಭೆ ನಡೆಯುವ ಸ್ಥಳ : **ಶ್ರೀ ಸಿದ್ಧಗಂಗಾ ಮಠ.**

ಅಧ್ಯಕ್ಷತೆ : **ಸನ್ಮಾನ್ಯ ಶ್ರೀ ಪುಟ್ಟಸ್ವಾಮಿಗೌಡರು,**
ಕೃಷಿ ಮತ್ತು ತೋಟಗಾರಿಕೆ ಸಚಿವರು, ಕರ್ನಾಟಕ ರಾಜ್ಯ.

ನಾಡಿನ ಭಕ್ತಾದಿಗಳು, ಅಭಿಮಾನಿಗಳು, ಹಿತೈಷಿಗಳು ಮತ್ತು ಹಳೆಯ ವಿದ್ಯಾರ್ಥಿಗಳು ಈ ಸಭೆಗೆ ಆಗಮಿಸಿ ಸಲಹೆ ಸಹಕಾರಗಳನ್ನಿತ್ತು ಮುಂದೆ ರೂಪಿತವಾಗುವ ಯೋಜನೆಗಳು ಜಯಪ್ರದವಾಗುವಂತೆ ನೆರವಾಗಬೇಕೆಂದು ಪ್ರಾರ್ಥಿಸುತ್ತೇವೆ.

ಆಮಂತ್ರಕ ಭಕ್ತರ ಪರವಾಗಿ,
**ನೇತ್ರದಾನಿ ಪದ್ಮಭೂಷಣ ಡಾ|| ಎಂ. ಸಿ. ಮೋದಿ.**

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ. ಶ್ರೀ ಸಿದ್ಧಗಂಗಾಮಠ.